ಗಳಗನಾಥ ಸುರಸಗ್ರಂಥಮಾಲಾ

## ಕಲಿಬಾಧಾ—ನಿವಾರಕವಾದ

ಸರಹಸ್ಯ

# ನಳಚರಿತ್ರೆ.


ಲೇಖಕ.

ವೆ. ತಿ. ಕುಲಕರಣಿ ಗಳಗನಾಥ



೧೯೩೮

ಮೊದಲನೆಯ ಆವೃತ್ತಿ ( ೧೦೦೦ ಪ್ರತಿಗಳು )

ಬೆಲೆ ೮ ಆಣೆ



ಮನೋಹರ ಗ್ರಂಥ ಭಾಂ

# ಪ್ರಸ್ತಾವನೆ.

ಈ ನಲಚರಿತ್ರವು ನಮ್ಮ "ರಹಸ್ಯಪ್ರಕಾಶಕ ಮಹಾ ಭಾರತಾಮೃತ" ದೊಳಗಿನ ವನಪರ್ವದೊಳಗಿಂದ ಎತ್ತಿ ಬರೆದದ್ದಾಗಿರುವದು. ಪ್ರೌಢವಿವಾಹದವರಲ್ಲಿ ಎಂತಹ ನಿಯತಾಚರಣೆಯೂ, ಎಂತಹ ಶೀಲವೂ, ಎಂತಹ ತೇಜಸ್ವಿತೆಯೂ ಇರುವವೆಂಬದನ್ನು, ನಳ-ದಮಯಂತಿಯರ ಚರಿತ್ರದಿಂದ ನೋಡಿಕೊಳ್ಳಬೇಕೆಂದು ಬುದ್ಧಿಪೂರ್ವಕವಾಗಿ ಇದನ್ನು ಸರಹಸ್ಯ ಮುದ್ರಿಸಿರುತ್ತದೆ. ಈ ಚರಿತ್ರದಲ್ಲಿಯ ರಹಸ್ಯಗಳೆಂದರೆ, ಸ್ತ್ರೀಪುರುಷರ ಶೀಲದ ಹಾಗು ಅವರ ಪರಸ್ಪರರ ಸಂಬಂಧದ ಹಿತಕರ ಸಂಗತಿಗಳ ವಿವೇಚನವೆಂದು ತಿಳಿದು, ತೇಜಸ್ವಿಗಳಾದ ಈ ನಳದಮಯಂತಿಯರ ಚರಿತ್ರದ ಕಡೆಯಲ್ಲಿ "ಸ್ತ್ರೀಸ್ವಾತಂತ್ರ್ಯ" "ಸ್ತ್ರೀಯರಲ್ಲಿಯ ನಾಲ್ಕು ವರ್ಗಗಳು" "ಸ್ತ್ರೀಯರ ಬಾಲ- ಪ್ರೌಢವಿವಾಹಗಳು" ಎಂಬ ವಿಷಯಗಳನ್ನು ಕುರಿತು ಮೂರು ಪ್ರಬಂಧಗಳನ್ನು ಕೊಟ್ಟಿರುತ್ತೇವೆ. ಅವನ್ನು ಮನಃಪೂರ್ವಕ ಓದಿದಾಗ, ವಾಚಕರ ವಿಚಾರಶಕ್ತಿಗೆ ಅಲ್ಪಮಟ್ಟಿಗಾದರೂ ಚಾಲನೆಯುಂಟಾದರೆ. ನಮ್ಮ ಶ್ರಮವು ಸಫಲವಾಯಿತೆಂದು ನಾವು ತಿಳಿಯುವೆವು.

ಆ ಮೂರು ಪ್ರಬಂಧಗಳಲ್ಲಿ "ಸ್ತ್ರೀಸ್ವಾತಂತ್ರ್ಯ" ವೆಂಬ ಪ್ರಬಂಧವನ್ನು, ನಮ್ಮ "ರಹಸ್ಯಪ್ರಕಾಶಕ ಮಹಾ ಭಾರತಾಮೃತ" ದ ಆದಿಪರ್ವದ ರಹಸ್ಯಗಳೊಳಗಿಂದಲೂ, ಉಳಿದ "ಸ್ತ್ರೀಯರಲ್ಲಿಯ ವರ್ಗಗಳು" "ಸ್ತ್ರೀಯರ ಬಾಲ-ಪ್ರೌಢವಿವಾಹಗಳು" ಎಂಬ ಎರಡು ಪ್ರಬಂಧಗಳನ್ನು "ದುರ್ಗದ ಬಿಚ್ಚುಗತ್ತಿ" ಎಂಬ ನಮ್ಮ ಕಾದಂಬರಿಯೊಳಗಿಂದಲೂ ಎತ್ತಿಕೊಂಡು ಇದರಲ್ಲಿ ಹಾಕಿರುತ್ತದೆ. ಎಲ್ಲರೂ ನಮ್ಮ ಎಲ್ಲ ಪುಸ್ತಕಓದುವಸಂಭವಕಡಿಮೆಯಾದ್ದರಿಂದ, ಹೆಣ್ಣುಮಕ್ಕಳು ಅವಶ್ಯವಾಗಿಓದ

ತಕ್ಕ ವಿಷಯಗಳೆಂದು ಭಾವಿಸಿರುವೆನಾವು, ಒಂದಿಲ್ಲೊಂದುಕಡೆಗೆ ಅವನ್ನು ಓದಲೆಂದು, ಬೇರೆ ಒತ್ತಟ್ಟಿಗೆ ಬಂದಿರುವ ಆ ಪ್ರಬಂಧಗಳನ್ನು ಈ ಪುಸ್ತಕದಲ್ಲಿಯೂಕೊಟ್ಟಿರುತ್ತೇವೆ. ಈ ಮೂರು ಪ್ರಬಂಧಗಳ ದ್ವಿರಾವೃತ್ತಿ ತ್ರಿರಾವೃತ್ತಿಗಳಾದರೂ ಲಾಭಕರವೇ ಎಂದು ನಮ್ಮ ಭಾವನೆಯಿರುವದು. ಶ್ರೀವೇದವ್ಯಾಸರ ಹದಿನೆಂಟು ಪುರಾಣಗಳಲ್ಲಿ ಹೀಗೆ ಕೆಲವು ವಿಷಯಗಳ ಪುನರಾವೃತ್ತಿಯಾಗಿರುವದನ್ನು ನೋಡಿ, ಜನಹಿತದೃಷ್ಟಿಯಿಂದ ನಾವೂ ಇಲ್ಲಿ ಆ ಮಹಾತ್ಮರ ಪದ್ಧತಿಯನ್ನು ಅನುಕರಿಸಿರುತ್ತೇವೆ.

| | |
|---|---|
| ಸದ್ಗುರುಕಾರ್ಯಾಲಯ<br>ಹಾವೇರಿ<br>ತಾರೀಖು ೧೧-೧೧-೩೮ ಇಸ್ವಿ | ಕನ್ನಡಿಗರ ಸೇವಕ<br>**ವೇ. ತಿ. ಕುಲಕರಣಿ**<br>**ಗಳಗನಾಥ.** |

ಕಲಿಬಾಧಾ–ನಿವಾರಕವಾದ

ಸರಹಸ್ಯ

# ನಳಚರಿತ್ರೆ.

## ೧ ನೆಯ ಪ್ರಕರಣ—ನಳನ ದೂತಕನು

ಹಿಂದಕ್ಕೆ ನಿಷಧ ದೇಶದಲ್ಲಿ ವೀರಸೇನನೆಂಬ ಹೆಸರಿನ ಒಬ್ಬ ವಿಖ್ಯಾತ ರಾಜನಿದ್ದು, ಆತನಿಗೆ ನಳನೆಂಬ ಒಬ್ಬ ಮಗನಿದ್ದನು. ಅಶ್ವವಿದ್ಯೆಯಲ್ಲಿ ನಿಪುಣನಾಗಿದ್ದ ಆ ನಳನು, ಇಂದ್ರನಂತೆ ಯಾವತ್ತುರಾಜರಿಗೂವಂದ್ಯನಾಗಿದ್ದನು. ಆತನು ಬ್ರಾಹ್ಮಣಪ್ರಿಯನು, ಶೂರನು, ವೇದಜ್ಞನು, ದ್ಯೂತಪ್ರಿಯನು, ಸತ್ಯವಾದಿಯು, ಉದಾರನು, ಜಿತೇಂದ್ರಿಯನು, ಶೂರನು ಇದ್ದನು. ಇದೇ ಕಾಲದಲ್ಲಿ ವಿದರ್ಭ ದೇಶದಲ್ಲಿ ಭಯಂಕರ ಪರಾಕ್ರಮಿಯೂ, ಶೂರನೂ, ಸಕಲಗುಣಸಂಪನ್ನನೂ ಆದ ಭೀಮನೆಂಬಹೆಸರಿನರಾಜನಿದ್ದನು. ಬಹುದಿವಸ ಸಂತತಿಯಾಗದಿದ್ದ ಆತನಿಗೆ, ದಮನೆಂಬಋಷಿಯ ಅನುಗ್ರಹದಿಂದ ದಮಯಂತಿ ಎಂಬ ಹೆಸರಿನ ಒಬ್ಬ ಹೆಣ್ಣುಮಗಳೂ, ದಮ–ದಾಂತ–ದಮನ ಎಂಬ ಹೆಸರಿನ ಮೂವರು ಗಂಡುಮಕ್ಕಳೂ ಆದರು. ದಮಯಂತಿಯು ಅತ್ಯಂತ ಸೌಂದರ್ಯಶಾಲಿನಿಯಾಗಿದ್ದು, ಯಾವತ್ತುಸದ್ಗುಣಗಳಿಂದ ಅಲಂಕೃತಳಾಗಿ ಜಗತ್ಪ್ರಸಿದ್ಧಳಾಗಿದ್ದಳು. ಅಂಥ ಸೌಂದರ್ಯಶಾಲಿನಿಯಾದ ಸ್ತ್ರೀಯು ದೇವತೆಗಳಲ್ಲಾಗಲಿ, ಮನುಷ್ಯರಲ್ಲಾಗಲಿ, ದಾನವರಲ್ಲಾಗಲಿ ಇದ್ದಿಲ್ಲ. ಆಕೆಯನ್ನು ನೋಡಿ, ದೇವತೆಗಳ ಮನಸ್ಸಿಗೂ ಆಲ್ಹಾದವಾಗುತ್ತಿತ್ತು. ಇತ್ತ ನಳನಾದರೂ ಅತ್ಯಂತ ರೂಪವಂತನಾಗಿದ್ದನು. ಹೀಗಿರುವಾಗ, ನಳನ ಮುಂದೆ ದಮಯಂತಿಯ ಗುಣಗಳನ್ನೂ, ದಮಯಂತಿಯ

ಮುಂದೆ ನಳನಗುಣಗಳನ್ನೂ ಅವರವರ ಬಳಿಯಲ್ಲಿದ್ದ ಜನರು ವರ್ಣಿಸುತ್ತಿದ್ದರು; ಆದ್ದರಿಂದ ಅವರಿಬ್ಬರ ಮನಸ್ಸಿನಲ್ಲಿಯೂ ಪರಸ್ಪರರ ವಿಷಯವಾಗಿ ಗುಪ್ತವಾದ ಇಚ್ಛೆಯು ಉತ್ಪನ್ನವಾಯಿತು. ಬರಬರುತ್ತ ಅವರಲ್ಲಿ ಈ ಇಚ್ಛೆಯು ಹೆಚ್ಚುತ್ತ ಹೋಗಲು, ಒಂದು ದಿನ ನಳರಾಜನು ಕಾಮಬಾಧೆಯನ್ನು ತಾಳಲಾರದೆ, ಏಕಾಂತದಲ್ಲಿ ಉಪವನದಲ್ಲಿ ಕುಳಿತಿದ್ದನು. ಆಗ ಅಲ್ಲಿ ಸುವರ್ಣಮಯಶರೀರದ ಸುಂದರ ಹಂಸಗಳು ಆತನ ಕಣ್ಣಿಗೆ ಬಿದ್ದವು. ಆಗ ನಳನು ಅವುಗಳಲ್ಲಿಯ ಒಂದು ಪಕ್ಷಿಯನ್ನು ಹಿಡಿಯಲು, ಅದು ನಳನನ್ನು ಕುರಿತು—"ಎಲೈ ರಾಜಾ, ನೀನು ನನ್ನನ್ನು ಕೊಲ್ಲಬೇಡ. ನಾನು ದಮಯಂತಿಯ ಬಳಿಗೆ ಹೋಗಿ, ಆಕೆಯು ಮತ್ತೊಬ್ಬರನ್ನು ಲಗ್ನವಾಗದಂತೆ, ನಿನ್ನ ಗುಣಗಳನ್ನು ಆಕೆಯ ಮುಂದೆ ವರ್ಣಿಸುವೆನು." ಎಂದು ಹೇಳಿತು. ಅದನ್ನು ಕೇಳಿ ನಳನು ಆ ಹಂಸಪಕ್ಷಿಯನ್ನು ಬಿಟ್ಟುಬಿಟ್ಟನು. ಆಗ ಆ ಪಕ್ಷಿಯು ತನ್ನ ಪರಿವಾರದೊಡನೆ ವಿದರ್ಭದೇಶಕ್ಕೆ ಹೋಗಿ, ಪ್ರಮೋದವೆಂಬ ಉಪವನದಲ್ಲಿ, ಸಖಿಯರೊಡನೆ ಕ್ರೀಡಿಸುತ್ತಿದ್ದ ದಮಯಂತಿಯ ಬಳಿಯಲ್ಲಿ ಇಳಿಯಿತು. ಆಗ ಆ ಪ್ರಮದೆಯರು ಆ ಸುಂದರ ಪಕ್ಷಿಗಳನ್ನು ನೋಡಿ, ಅವನ್ನು ಹಿಡಿಯಬೇಕೆಂದು ಒಬ್ಬೊಬ್ಬರು ಒಂದೊಂದು ಪಕ್ಷಿಯ ಬೆನ್ನುಹತ್ತಿದರು. ಆಗ ದಮಯಂತಿಯು ಬೆನ್ನುಹತ್ತಿದ ಪಕ್ಷಿಯು ಮನುಷ್ಯವಾಣಿಯಿಂದ ಆಕೆಯನ್ನು ಕುರಿತು—"ದಮಯಂತೀ, ನಿಷಧದೇಶದಲ್ಲಿ ನಳನೆಂಬ ಒಬ್ಬ ರಾಜನಿರುವನು. ಸೌಂದರ್ಯದಲ್ಲಿ ಆತನು ಮೂರ್ತಿಮಂತ ಮದನನಾಗಿರುವನು. ಅಂಥ ರೂಪವಂತರನ್ನು ನಾವು ದೇವ, ಗಂಧರ್ವ, ಮನುಷ್ಯ, ರಾಕ್ಷಸ ಮೊದಲಾದವರಲ್ಲಿ ಎಲ್ಲಿಯೂ ನೋಡಲಿಲ್ಲ. ದಮಯಂತೀ, ನೀನೂ ಸ್ತ್ರೀಯರಲ್ಲಿ ರತ್ನವಾಗಿರುವೆ; ಆತನೂ ಪುರುಷರಲ್ಲಿ ರತ್ನವಾಗಿರುವನು; ಆದ್ದರಿಂದ ನಿಮ್ಮಿಬ್ಬರ ಸಮಾಗಮವಾದರೆ ಬಹಳ ನೆಟ್ಟಗಾಗುವದು" ಎಂದು ನುಡಿಯಲು, ದಮಯಂತಿಯು ಆ ಪಕ್ಷಿಗೆ—"ನೀನು ನಳರಾಜನಿಗಾದರೂ ಹೀಗೆಯೇ ಹೇಳು" ಎಂದು ಹೇಳಿದಳು. ಅದಕ್ಕೆ ಹಂಸವು—"ಹಾಗೆಯೇ ಆಗಲಿ" ಎಂದು ಹೇಳಿ, ನಿಷಧದೇಶಕ್ಕೆ ಬಂದು ನಳರಾಜನಿಗೆ ಆ ವೃತ್ತಾಂತವನ್ನು ಹೇಳಿತು.

ಹಂಸಪಕ್ಷಿಯಿಂದ ನಳನ ವೃತ್ತಾಂತವನ್ನು ಕೇಳಿದ ದಮಯಂತಿಯು, ನಳನ ಚಿಂತೆಯಿಂದ ದಿನದಿನಕ್ಕೆ ಸೊರಗಹತ್ತಿದಳು. ಇದನ್ನು ನೋಡಿ ಆಕೆಯ ಭಾವವನ್ನರಿತು ಆಕೆಯ ಸಖಿಯರು ಭೀಮರಾಜನಿಗೆ ಈ ಸುದ್ದಿಯನ್ನು ಹೇಳಿದರು. ಆಗ ಭೀಮರಾಜನು ಮನಸ್ಸಿನಲ್ಲಿ—"ದಮಯಂತಿಯು ವಯಸ್ಕಳಾದದ್ದರಿಂದ, ಇನ್ನು ನಾನು ಆಕೆಗೆ ಯೋಗ್ಯಪತಿಯನ್ನು ದೊರಕಿಸಿಕೊಡುವದು ನನ್ನ ಕರ್ತವ್ಯವಾಗಿರುವದು. ಈ ವಿಷಯದಲ್ಲಿ ನಾನು ವಿಲಂಬಮಾಡಿದ್ದೇ ದಮಯಂತಿಯ ಚಿಂತೆಗೆ ಕಾರಣವಾಗಿರಬಹುದು" ಎಂದು ಯೋಚಿಸಿ, ದಮಯಂತಿಯ ಸ್ವಯಂವರ ಮಾಡಬೇಕೆಂದು ನಿಶ್ಚಯಿಸಿ, ಸ್ವಯಂವರಕ್ಕಾಗಿ ಬೇರೆ ಬೇರೆ ಅರಸರಿಗೆ ಪತ್ರಗಳನ್ನು ಕಳಿಸಿದನು. "ದಮಯಂತಿಯ ಸ್ವಯಂವರವು" ಎಂಬ ಸುದ್ದಿಯನ್ನು ಕೇಳಿ, ಎಲ್ಲ ಅರಸರು ಭೀಮನ ರಾಜಧಾನಿಯಾದ ಕುಂಡಿನೀಪುರಿಗೆ ಬರತೊಡಗಿದರು. ಆ ಭೂಪರ ರಥಗಳಧ್ವನಿಯಿಂದಲೂ, ಕುದುರೆಗಳ ಹೇಕರಿಸುವಿಕೆಯಿಂದಲೂ, ಆನೆಗಳ ಬೃಂಹಿತದಿಂದಲೂ ಕುಂಡಿನೀ ಪಟ್ಟಣವು ಗಜಬಜಿಸತೊಡಗಿತು. ಬಂದ ಅರಸರನ್ನು ಭೀಮನು ಬಹಳವಾಗಿ ಸತ್ಕರಿಸಿದನು. ಅವರೂ ಭೀಮನ ಆದರೋಪಚಾರಗಳಿಂದ ಸಂತುಷ್ಟರಾಗಿ, ಆತನ ರಾಜಧಾನಿಯಲ್ಲಿ ವಾಸಿಸಿದರು.

ಹೀಗಿರುವಾಗ ನಾರದ–ಪರ್ವತ ಎಂಬವರಿಬ್ಬರು ಮುನಿಶ್ರೇಷ್ಠರು, ಭೂಲೋಕದಿಂದ ಇಂದ್ರಲೋಕಕ್ಕೆ ಹೋದರು. ಇಂದ್ರನು ಅವರನ್ನು ಪೂಜಿಸಿ, ಅವರ ಕುಶಲಪ್ರಶ್ನ ಮಾಡಿದನು. ಅದಕ್ಕೆ ಆ ಮುನಿಗಳು, ತಾವು ಕ್ಷೇಮದಿಂದ ಇದ್ದದ್ದನ್ನೂ, ಭೂಲೋಕದಲ್ಲಿಯ ಎಲ್ಲ ಅರಸರೂ ಕ್ಷೇಮದಿಂದಿದ್ದದ್ದನ್ನೂ ತಿಳಿಸಿದರು. ಆಗ ದೇವೇಂದ್ರನು ಆ ಋಷಿಗಳನ್ನು ಕುರಿತು–"ಋಷಿಶ್ರೇಷ್ಠರೇ, ಯುದ್ಧದಲ್ಲಿ ಹಿಂಜರಿಯದೆ ಕಾದಿ ಮರಣಹೊಂದುತ್ತಿದ್ದರಾಜರು, ನನ್ನ ಲೋಕಕ್ಕೆ ಬಂದು ನನ್ನಂತೆಯೇ ಭೋಗಗಳನ್ನು ಭೋಗಿಸುತ್ತಿದ್ದರು; ಆದರೆ ಈಗ ಅವರು ಬಾರದಾಗಿದ್ದಾರಲ್ಲ? ಈಗ ಅವರು ಏನು ಮಾಡುತ್ತಿರುವರು?" ಎಂದು ಕೇಳಲು, ನಾರದರು—"ದೇವೇಂದ್ರಾ, ಈಗ ಭೂಮಿಯಲ್ಲಿ ವಿದರ್ಭರಾಜಪುತ್ರಿಯಾದ ದಮಯಂತಿಯ ಸ್ವಯಂವರಕ್ಕಾಗಿ ಎಲ್ಲ ಅರಸರು ಹೋಗಿರುವರು" ಎಂದು

ಹೇಳಿದರು. ಹೀಗೆ ಇಂದ್ರ ಸಭೆಯಲ್ಲಿ ನಾರದರು ಹೇಳಿದ್ದನ್ನು ಯಾವತ್ತು ಲೋಕಪಾಲರು ಕೇಳಿ ಸಂತೋಷಪಟ್ಟು, ತಾವೂ ಸ್ವಯಂವರಕ್ಕೆ ಹೋಗಬೇಕೆಂದು ವಿಮಾನದಲ್ಲಿ ಕುಳಿತು ಪರಿವಾರದೊಡನೆ ಸಾಗಿದರು. ಇತ್ತ ನಳನೂ ಸ್ವಯಂವರಕ್ಕಾಗಿ ಹೊರಟು ಬರುತ್ತಿರುವಾಗ, ಆತನು ಮದನನಂತೆ ರೂಪಸಂಪನ್ನನಾಗಿರುವದನ್ನು ದೇವತೆಗಳು ನೋಡಿ, ದಮಯಂತಿಯ ಪ್ರಾಪ್ತಿಯವಿಷಯದಲ್ಲಿ ಅವರು ಶಂಕಿತರಾದರು. ಆಗ ಅವರು ತಮ್ಮ ವಿಮಾನಗಳನ್ನು ಅಂತರಿಕ್ಷದಲ್ಲಿಯೇ ಬಿಟ್ಟು ಭೂಲೋಕಕ್ಕೆ ಇಳಿದು, ಸ್ವಯಂವರಕ್ಕಾಗಿ ಸಾಗಿರುವ ನಳನನ್ನು ಕುರಿತು—"ಎಲೈ ನಿಷಧಾಧಿಪತೇ ನಳಾ, ನೀನು ಅತ್ಯಂತ ಸತ್ಯನಿಷ್ಠರುವೆ; ಆದ್ದರಿಂದ ನರಶ್ರೇಷ್ಠಾ, ನೀನು ನಮ್ಮ ದೂತನಾಗಿ ನಮಗೆ ಸಹಾಯಮಾಡು" ಎಂದು ಹೇಳಿದರು.

ದೇವತೆಗಳ ಈ ಮಾತನ್ನು ಕೇಳಿ ನಳರಾಜನು—"ನಿಮಗೆ ಸಹಾಯಮಾಡುವೆನು" ಎಂದು ಹೇಳಿ, ಇಂದ್ರನ ಮುಂದೆ ಕೈಜೋಡಿಸಿ ನಿಂತುಕೊಂಡು—"ತಾವು ಯಾರು? ನಾನು ಯಾರ ದೂತನಾಗಬೇಕು? ನಿಮ್ಮ ಯಾವ ಕೆಲಸವನ್ನು ಮಾಡಬೇಕು?" ಎಂದು ಕೇಳಿದನು. ಅದಕ್ಕೆ ಇಂದ್ರನು—

ಇಂದ್ರ—ನಾವು ದೇವತೆಗಳು, ದಮಯಂತಿಯ ಸಲುವಾಗಿ ಬಂದಿರುವೆವು. ನಾನು ಇಂದ್ರನು, ಈತನು ಅಗ್ನಿಯು, ಈತನು ಸರ್ವರ ಪ್ರಾಣಹರಣಮಾಡುವ ಯಮನು. ನೀನು ದಮಯಂತಿಯ ಬಳಿಗೆ ಹೋಗಿ, "ಇಂದ್ರಾದಿದೇವತೆಗಳು ನಿನ್ನ ಸಭೆಯನ್ನು ನೋಡಲಿಕ್ಕೆ ಬಂದಿದ್ದು, ಅವರಲ್ಲಿ ಇಂದ್ರ, ಅಗ್ನಿ, ವರುಣ, ಯಮ ಇವರು ನಿನ್ನನ್ನು ಲಗ್ನವಾಗಲು ಇಚ್ಛಿಸುತ್ತಿರುವದರಿಂದ, ಅವರಲ್ಲಿ ಯಾರನ್ನಾದರೂ ಒಬ್ಬರನ್ನು ನೀನು ಲಗ್ನವಾಗು" ಎಂದು ಆಕೆಗೆ ತಿಳಿಸು.

ನಳ (ಕೈಜೋಡಿಸಿ)—ನಾನೂ ದಮಯಂತಿಯನ್ನು ಲಗ್ನವಾಗಬೇಕೆಂತಲೇ ಬಂದಿರುವದರಿಂದ, ನನ್ನನ್ನು ಆಕೆಯಬಳಿಗೆ ದೂತನಾಗಿ ಕಳಿಸುವದು ಯೋಗ್ಯವಲ್ಲ; ಆದ್ದರಿಂದ ದೇವತೆಗಳಿರಾ, ಇದಕ್ಕಾಗಿ ನನ್ನನ್ನು ಕ್ಷಮಿಸಿರಿ.

ಇಂದ್ರ—ನಿಷಧಾಧಿಪತೇ, ಮೊದಲು ಮಾಡುತ್ತೇನೆಂದು ಹೇಳಿ,

ಈಗ ಆಗುವದಿಲ್ಲೆಂದು ಹೇಳುವದು ಹೇಗೆ? ಆದ್ದರಿಂದ ಬೇಗನೆ ದಮಯಂತಿಯ ಬಳಿಗೆ ಹೋಗು, ತಡಮಾಡಬೇಡ.

ನಳ—ರಾಜಮಂದಿರದಲ್ಲಿ ಬಿಗಿಯಾದ ಕಾವಲಿರುವದು; ಅಂದ ಬಳಿಕ ನಾನು ಹೋಗುವದು ಹೇಗೆ?

ಇಂದ್ರ—ಅಲ್ಲಿ ನಿನಗೆ ಪ್ರವೇಶಮಾಡಲಿಕ್ಕೆ ಬರುವದು.

ನಳ—ಹಾಗಿದ್ದರೆ ಹೋಗುವೆನು.

ಈ ಮೋರೆಗೆ ನುಡಿದು ನಳರಾಜನು ದಮಯಂತಿಯ ಮಂದಿರವನ್ನು ಪ್ರವೇಶಿಸಿದನು. ಆಗ ಸಖಿಯರ ಮಧ್ಯದಲ್ಲಿ ಕುಳಿತಿರುವ ಅತ್ಯಂತ ಸುಂದರಿಯಾದ ದಮಯಂತಿಯನ್ನು ನೋಡಿ, ಆತನ ಕಾಮಬಾಧೆಯು ಹೆಚ್ಚಿತು; ಆದರೂ ತನ್ನ ಪ್ರತಿಜ್ಞೆಯನ್ನು ಸತ್ಯವಾಗಿ ಮಾಡಲು ಅದನ್ನು ಆತನು ಬಿಗಿಹಿಡಿದನು. ಅತ್ತ ಸಖಿಯರೊಡನೆ ದಮಯಂತಿಯೂ ನಳನ ರೂಪವನ್ನು ನೋಡಿ ಬೆರಗಾಗಿ ಎದ್ದು ನಿಂತಳು. ಆಗ ಆ ಪ್ರಮದೆಯರು ಬಾಯಿಂದ ಮಾತಾಡದಿದ್ದರೂ, ಮನಸ್ಸಿನಿಂದ ನಳನನ್ನು ನಮಸ್ಕರಿಸಿದರು. ಅವರು ಮನಸ್ಸಿನಲ್ಲಿ—“ ಅಹಹ! ಏನು ರೂಪವು, ಏನು ಕಾಂತಿಯು, ಏನು ಧೈರ್ಯವು. ಈತನು ದೇವತೆಯಾಗಿರಬಹುದೋ? ಅಥವಾ ಯಕ್ಷ-ಗಂಧರ್ವಾದಿಗಳಲ್ಲಿ ಯಾರೊಬ್ಬರು ಆಗಿರಬಹುದೋ?” ಎಂದು ಯೋಚಿಸತೊಡಗಿದರು; ಆದರೂ ಅವರ ಮುಖದಿಂದ ಅಕ್ಷರಗಳು ಹೊರಡದಾದವು. ಹೀಗೆ ತನ್ನ ತೇಜಸ್ಸಿನಿಂದ ಕಣ್ಣು ಕುಕ್ಕಿ ಹೋಗಿದ್ದ ಆ ಪ್ರಮದೆಯರು ಸುಮ್ಮನೆ ನಿಂತಿರುವದನ್ನು ನೋಡಿ ನಳನು ಮುಗುಳುನಗೆನಕ್ಕನು. ಆಗ ದಮಯಂತಿಯು ಆಶ್ಚರ್ಯದಿಂದ ಆತನನ್ನು ಕುರಿತು—“ ಎಲೈ ಸರ್ವಾಂಗಸುಂದರಾ ವೀರಾ, ದೇವತೆಯಂತೆ ಇಲ್ಲಿಗೆ ಬಂದಿರುವ ನಿನ್ನನ್ನು ನೋಡಿ, ನನ್ನ ಕಾಮವಾಸನೆಯು ಹೆಚ್ಚುತ್ತಿರುವದು; ಆದರೆ ನೀನು ಯಾರು? ಇಂಥ ಬಿಕ್ಕಟ್ಟಿನ ಕಾವಲಿನಿಂದ ನೀನು ಹೇಗೆ ಬಂದೆ?

ನಳ—ಎಲೈ ಕಲ್ಯಾಣೀ, ನಾನು ನಳನು, ದೇವತೆಗಳ ದೂತನಾಗಿ ಇಲ್ಲಿಗೆ ಬಂದಿರುವೆನು. ಇಂದ್ರ-ಅಗ್ನಿ-ವರುಣ-ಯಮ ಎಂಬ ದೇವತೆಗಳು, “ ನೀನು ತಮಗೆ ದೊರೆಯಬೇಕೆಂ”ದು ಇಚ್ಛಿಸುತ್ತಿರುವರು; ಆದ್ದ

ರಿಂದ ಕಲ್ಯಾಣೀ, ಅವರಲ್ಲಿ ಯಾರೊಬ್ಬ ದೇವತೆಯ ಕೊರಳಿಗೆ ನೀನು ಮಾಲೆಹಾಕು. ಅವರ ಪ್ರಭಾವದಿಂದಲೇ ನಾನು ಯಾರಿಗೂ ಗೊತ್ತಾಗದಂತೆ ಈ ಮಂದಿರದಲ್ಲಿ ಬಂದಿರುವೆನು. ನನ್ನನ್ನು ಯಾರೂ ನೋಡಲಿಲ್ಲ; ನನ್ನನ್ನು ಯಾರೂ ಮಾತಾಡಿಸಲಿಲ್ಲ. ಇನ್ನು ನಿನ್ನ ಮನಸ್ಸಿಗೆ ಬಂದಂತೆ ನಿಶ್ಚಯಮಾಡು.

ನಳನ ಈ ಮಾತುಗಳನ್ನು ಕೇಳಿ ದಮಯಂತಿಯು ದೇವತೆಗಳನ್ನು ನಮಸ್ಕರಿಸಿ ನಗುತ್ತ ನಳನನ್ನು ಕುರಿತು—

ದಮಯಂತಿ—ಎಲೈ ರಾಜಾ, ಹೀಗೆ ಮಾತಾಡುವ ನಿನಗೆ ನಾನು ಏನು ಹೇಳಲಿ? ಹಂಸವು ನನ್ನ ಮುಂದೆ ನಿನ್ನ ವರ್ಣನ ಮಾಡಿದಾಗಲೇ, ನಾನು ನಿನ್ನನ್ನು ಲಗ್ನವಾಗಬೇಕೆಂದು ನಿಶ್ಚಯಿಸಿರುವೆನು. ನಿನ್ನ ಪ್ರಾಪ್ತಿಯಾಗದ್ದರಿಂದ ನಾನು ಚಿಂತೆಯಿಂದ ಕೊರಗುತ್ತಿದ್ದೆನು. ನೀನು ಇಲ್ಲಿಗೆ ಬರಬೇಕೆಂತಲೇ ಯಾವತ್ತು ಅರಸರನ್ನು ಸ್ವಯಂವರದ ನೆವದಿಂದ ಈಗ ಕರೆಸಿರುವದು; ಆದ್ದರಿಂದ ನಳಾ, ನೀನು ನನ್ನ ಪಾಣಿಗ್ರಹಣ ಮಾಡು. ನನ್ನ ಯಾವತ್ತು ಸಂಪತ್ತು ನಿನ್ನದಿರುವದು. ಇದರಮೇಲೆಯೂ ನೀನು ನನ್ನ ಪಾಣಿಗ್ರಹಣ ಮಾಡದಿದ್ದರೆ, ನಾನು ವಿಷಕುಡಿದಾಗಲಿ, ಬೆಂಕಿಯಲ್ಲಿ ಹಾರಿಯಾಗಲಿ, ಉರಲು ಹಾಕಿಕೊಂಡಾಗಲಿ, ನೀರಲ್ಲಿ ಮುಣುಗಿಯಾಗಲಿ ಪ್ರಾಣತ್ಯಾಗ ಮಾಡುವೆನು.

ನಳ—ಲೋಕಪಾಲರು ಬಂದಿರಲು, ಮನುಷ್ಯನಾದ ನನ್ನನ್ನು ಯಾಕೆ ಇಚ್ಛಿಸುತ್ತಿರುವೆ? ಐಶ್ವರ್ಯಸಂಪನ್ನರಾದ ಆ ಮಹಾತ್ಮರ ಪಾದ ಧೂಳಿಯನ್ನು ನಾನು ಸರಿಗಟ್ಟೆನು; ಆದ್ದರಿಂದ ಆ ಲೋಕಪಾಲಕರ ಕಡೆಗೆ ನಿನ್ನ ಮನಸ್ಸನ್ನು ತಿರುಗಿಸು. ಮನುಷ್ಯರು ದೇವತೆಗಳ ಇಚ್ಛೆಗೆ ವಿರುದ್ಧವಾಗಿ ನಡೆದರೆ ಮರಣಹೊಂದುವರು; ಆದ್ದರಿಂದ ಸುಂದರೀ, ನೀನು ಆ ದೇವತೆಗಳನ್ನು ಲಗ್ನವಾಗಿ ನನ್ನನ್ನು ಸಂರಕ್ಷಿಸು. ನೀನು ದೇವತೆಗಳನ್ನು ಲಗ್ನವಾದರೆ ಸ್ವರ್ಗದೊಳಗಿನ ಅಲಭ್ಯ ಉಪಭೋಗಗಳು ನಿನಗೆ ದೊರೆಯುವವು. ಪ್ರತ್ಯಕ್ಷ ದೇವತೆಗಳೇ ಲಗ್ನವಾಗಲು ಇಚ್ಛಿಸುತ್ತಿರಲು, ಯಾವಸ್ತ್ರೀಯು ನಿರಾಕರಿಸಬಹುದು?

ದಮಯಂತಿ (ದುಃಖದಿಂದ ಕಣ್ಣೀರು ತುಂಬಲು, ನಡಗುತ್ತ ಕೈ ಜೋಡಿಸಿ)—ಎಲೈ ಪೃಥ್ವೀಪತಿಯೇ, ಯಾವತ್ತು ದೇವತೆಗಳನ್ನು ನಮಸ್ಕರಿಸಿ, ನಾನು ನಿನ್ನನ್ನೇ ಲಗ್ನವಾಗತಕ್ಕವಳು! ಇದನ್ನು ನಿಶ್ಚಯವೆಂದು ತಿಳಿ.

ನಲ—ಎಲೈ ಕಲ್ಯಾಣೀ, ದೇವತೆಗಳ ದೂತನಾಗಿ ಬಂದು, ಅವರ ಕಾರ್ಯಮಾಡಲು ಪ್ರಾರಂಭಿಸಿ ಸ್ವಾರ್ಥವನ್ನು ಸಾಧಿಸಲಾ? ಈ ಸ್ವಾರ್ಥವು ಧರ್ಮಸಮ್ಮತವಾಗಿದ್ದರೆ ಅದನ್ನು ನಾನು ಸಾಧಿಸಬಹುದು; ಆದ್ದರಿಂದ ನನಗೆ ದೋಷತಟ್ಟದಂತೆ ಸ್ವಾರ್ಥಸಾಧಿಸಲಿಕ್ಕೆ ಬರುವ ಹಾಗೆ ಏನಾದರೂ ಉಪಾಯಮಾಡು.

ದಮಯಂತಿ (ಗದ್ಗದಸ್ವರದಿಂದ) — ನರಾಧಿಪಾ, ನಾನು ಅಂಥ ಉಪಾಯವನ್ನು ಹುಡುಕಿರುವೆನು. ದೇವತೆಗಳೊಡನೆ ನೀನೂ ಸ್ವಯಂವರಕ್ಕೆ ಬಾ; ಅಂದರೆ ಯಾವತ್ತೂ ಅರಸರನ್ನೂ, ಲೋಕಪಾಲರಾದ ದೇವತೆಗಳನ್ನೂ ಬಿಟ್ಟು, ನಿನ್ನ ಕೊರಳಿಗೇ ಮಾಲೆ ಹಾಕುವೆನು. ಅದರಿಂದ ನಿನಗೆ ಯಾವ ದೋಷವೂ ತಟ್ಟುವದಿಲ್ಲ.

ಈ ಮೇರೆಗೆ ನುಡಿದ ದಮಯಂತಿಯ ಮಾತುಗಳನ್ನು ಕೇಳಿ ನಳರಾಜನು ದೇವತೆಗಳ ಬಳಿಗೆ ಹೋಗಲು, ಅವರು— "ಎಲೈ ರಾಜಾ, ನೀನು ದಮಯಂತಿಯನ್ನು ಕಂಡೆಯಾ? ಆಕೆಯು ನಮ್ಮ ವಿಷಯವಾಗಿ ಏನು ಅಂದಳು?" ಎಂದು ಕೇಳಲು, ನಳನು— "ನಿಮ್ಮ ಅಪ್ಪಣೆಯಂತೆ ದಮಯಂತಿಯ ಮಂದಿರಕ್ಕೆ ಹೋದೆನು. ದಮಯಂತಿಯು, ಹಾಗು ಆಕೆಯ ಸಖಿಯರ ಹೊರತು ಬೇರೆ ಯಾರಿಗೂ ನಾನು ಕಾಣಿಸಲಿಲ್ಲ. ನಾನು ಹೋಗಿ ದಮಯಂತಿಯ ಮುಂದೆ ನಿಮ್ಮ ಗುಣಗಳನ್ನು ವರ್ಣಿಸಿ, ನಿಮ್ಮ ವಿಚಾರವನ್ನು ತಿಳಿಸಿದೆನು; ಆದರೆ ನನ್ನನ್ನೇ ಲಗ್ನವಾಗುವೆನೆಂದು ಆಕೆಯು ಹೇಳಿದಳು. ನಾಳೆ ಸ್ವಯಂವರದಲ್ಲಿ ನನ್ನ ಕೊರಳಿಗೇ ಮಾಲೆಹಾಕುವೆನೆಂದು ಆಕೆಯು ಹೇಳಿದ್ದಾಳೆ; ಆದ್ದರಿಂದ ಮುಂದೆ ಏನು ಮಾಡಬೇಕೆಂಬದನ್ನು ನಿರ್ಧರಿಸಲು ತಾವು ಸಮರ್ಥರಿರುವಿರಿ!

## ೨ನೆ ಪ್ರಕರಣ-ದಮಯಂತೀ ಸ್ವಯಂವರ

ಬಳಿಕ ಭೀ ಮ ರಾ ಜ ನು ಉತ್ತಮ ಮುಹೂರ್ತವನ್ನು ನೋಡಿ, ಸ್ವಯಂವರಕ್ಕಾಗಿ ರಾಜರನ್ನು ಕರೆದನು. ಆಗ ಯಾವತ್ತು ರಾಜರು ದಮಯಂತಿಯ ವಿಷಯದಲ್ಲಿ ಕಾಮಪೀಡಿತರಾಗಿ, ಸಿಂಹಗಳು ಗುಹೆಗಳನ್ನು ಹೊಗುವಂತೆ, ಆ ಸ್ವಯಂವರ ಮಂಟಪವನ್ನು ಹೊಕ್ಕರು. ಬಳಿಕ ತನ್ನ ಅಂಗಕಾಂತಿಯಿಂದ ಆ ರಾಜರ ಅಂತ:ಕರಣಗಳನ್ನೂ, ದೃಷ್ಟಿಗಳನ್ನೂ ಆಕರ್ಷಿಸುತ್ತ, ಸುಮುಖಿಯಾದ ದಮಯಂತಿಯು ಆ ಸಭೆಯನ್ನು ಪ್ರವೇಶಿಸಿದಳು. ಆಗ ಆ ರಾಜರ ದೃಷ್ಟಿಗಳು ದಮಯಂತಿಯ ಯಾವ ಅವಯವಗಳಲ್ಲಿ ಬಿದ್ದವೋ, ಅವು ಅಲ್ಲಿಯೇ ನಟ್ಟು ಹೋದವು. ಮುಂದೆ ಅರಸರ ಹೆಸರುಗಳನ್ನು ಹೇಳುವಾಗ, ಒಂದೇ ಆಕಾರದ ಐವರು ಪುರುಷರು ಆ ಭೀಮಕನ್ನೆಯ ಕಣ್ಣಿಗೆ ಬಿದ್ದರು. ಅವರನ್ನು ನೋಡಿ, ಆಕೆಗೆ ನಳರಾಜನು ಯಾರೆಂಬದನ್ನು ಕಂಡುಹಿಡಿಯಲಿಕ್ಕೆ ಬಾರದಾಯಿತು. ಅದರಿಂದ ಆಕೆಯು ವ್ಯಸನಪಟ್ಟಳು. ತಾನು ಪೂರ್ವದಲ್ಲಿ ಕೇಳಿದ್ದ ದೇವತೆಗಳ ಲಕ್ಷಣಗಳು ಒಂದೂ ಅವರಲ್ಲಿ ತೋರದಾದವು. ಆಗ ಆಕೆಯು ದೇವತೆಗಳಿಗೇ ಶರಣು ಹೋಗಬೇಕೆಂದು, ಮನಸ್ಸಿನಿಂದಲೂ, ಅವರನ್ನು ನಮಸ್ಕರಿಸಿ ಕೈಜೋಡಿಸಿ ನಡಗುತ್ತ ನಡಗುತ್ತ— "ಹಂಸದ ಮಾತುಗಳನ್ನು ಕೇಳಿ ನಾನು ನಳನನ್ನೇ ಮನಸ್ಸಿನಿಂದ ವರಿಸಿದ್ದು ನಿಜವಿದ್ದರೆ, ಮತ್ತು ಮನಸ್ಸಿನಿಂದಲೂ, ವಾಣಿಯಿಂದಲೂ ನಾನು ನಳನಹೊರತು ಬೇರೆಯವರನ್ನು ಪ್ರೀತಿಸದೆಯಿದ್ದದ್ದು ನಿಜವಿದ್ದರೆ, ನಿಷಧಾದಿಪತಿ ನಳನನ್ನೇ ದೇವರು ನನಗೆ ನಿಯಮಿಸಿ ಇಟ್ಟದ್ದಾಗಿದ್ದರೆ, ಅದರಂತೆ ನಳನ ಸಲುವಾಗಿಯೇ ಈ ಸ್ವಯಂವರವನ್ನು ಆರಂಭಿಸಿದ್ದುಸತ್ಯವಿದ್ದರೆ, ದೇವತೆಗಳು ನನಗೆ ಆತನನ್ನು ಅರ್ಪಿಸಬೇಕು; ಮತ್ತು ಮಹಾ ಸಮರ್ಥರಾದ ಲೋಕಪಾಲಕರಾದರೂ ನಳರಾಜನನ್ನು ನಾನು ಗುರುತಿಸುವಂತೆ, ತಮ್ಮ ರೂಪಗಳನ್ನು ಪ್ರಕಟಿಸಬೇಕು.

ಈ ಸೋರಿಗೆ ದಮಯಂತಿಯು ಮಾಡಿದ ದೈನ್ಯಯುಕ್ತ ವಿಲಾಪ ವನ್ನು ಕೇಳಿ, ಆಕೆಯ ದೃಢನಿಶ್ಚಯವನ್ನೂ, ನಳರಾಜನ ಮೇಲಿನ ಆಕೆಯ ಪ್ರೀತಿಯನ್ನೂ, ಆಕೆಯ ಅಂತಃಕರಣದ ಶುದ್ಧತ್ವವನ್ನೂ-ಜ್ಞಾನವನ್ನೂ, ನಳರಾಜನ ವಿಷಯದ ಆಕೆಯ ಪೂಜ್ಯಬುದ್ಧಿಯನ್ನೂ, ನಳರಾಜನ ಮೇಲಿನ ಆಕೆಯ ಸ್ನೇಹವನ್ನೂ ಅರಿತು, ದಮಯಂತಿಯ ಪ್ರಾರ್ಥನೆ ಯಂತೆ ದೇವತೆಗಳು ತಮ್ಮ ಚಿಹ್ನಗಳನ್ನು ಧರಿಸುವ ಧೈರ್ಯಮಾಡಿದರು. ಆಗ ಮೈಬೆವರದವರೂ, ಎವೆಯಿಕ್ಕದವರೂ, ಬಾಡದೆಯಿದ್ದ ಮಾಲೆ ಧರಿಸಿ ದವರೂ, ಶರೀರಕ್ಕೆ ಧೂಲಿ ಹತ್ತದವರೂ, ಭೂಮಿಗೆ ಸ್ಪರ್ಶವಾಗದಂತೆ ನಿಂತವರೂ ಆದವರನ್ನು ದೇವತೆಗಳೆಂತಲೂ, ಇದರ ವಿರುದ್ಧ ಲಕ್ಷಣಗಳು ಳ್ಳವನನ್ನು ನಳನೆಂತಲೂ ದಮಯಂತಿಯು ಗುರುತಿಸಿ, ನಳನ ಧೋತರ ವನ್ನು ಹಿಡಿದು ಆತನ ಕೊರಳಿಗೇ ಹೂಮಾಲೆಯನ್ನು ಹಾಕಿದಳು! ಅದನ್ನು ನೋಡಿ ಎಲ್ಲರೂ ಸಂತೋಷಪಟ್ಟರು. ಆಗ ವೀರಸೇನ ಪುತ್ರ ನಾದ ನಳನು ಆನಂದದಿಂದ ದಮಯಂತಿಯನ್ನು ಕುರಿತು— "ಎಲೈ ಕಲ್ಯಾಣೀ, ನಾನು ಮನುಷ್ಯನಿದ್ದು, ದೇವತೆಗಳ ಸಮಕ್ಷ ನನ್ನ ಲಗ್ನ ಮಾಡಿ ಕೊಂಡದ್ದರಿಂದ, ನಾನು ನಿನ್ನ ಪತಿಯಾಗಿದ್ದರೂ ನಿನ್ನ ಅಪ್ಪಣೆಪಾಲಿಸುವಲ್ಲಿ ತತ್ಪರನಾಗಿರುವೆನೆಂಬದನ್ನು ನಂಬು. ನಾನು ಬದುಕಿರುವವರೆಗೆ ನಿನಗೆ ಅಂಕಿತನಾಗಿ ನಡೆಯುವೆನು." ಎಂದು ಹೇಳಿದನು. ದಮಯಂತಿಯೂ ನಳನನ್ನು ಅಭಿನಂದಿಸಿದಳು. ಆಗ ದೇವತೆಗಳು ನಳನಿಗೆ ಎರಡೆರಡು ವರ ಗಳನ್ನು ಕೊಟ್ಟರು. ಇಂದ್ರನು ಪ್ರಸನ್ನನಾಗಿ ನಳನಿಗೆ—"ನಳಾ, ನಿನಗೆ ಯಜ್ಞದಲ್ಲಿ ಪ್ರತ್ಯಕ್ಷನನ್ನ ದರ್ಶನವಾಗುವದೆಂ" ತಲೂ, "ಅಪ್ರತಿಮ ಸದ್ಗ ತಿಯು ನಿನಗೆ ಪ್ರಾಪ್ತವಾಗುವದೆಂ" ತಲೂ ಹೇಳಿದನು. ಅಗ್ನಿಯು— "ಬೇಕಾದಲ್ಲಿ ನಳನ ಇಚ್ಛೆಯಂತೆ ನಾನು ಉತ್ಪನ್ನನಾಗುವೆನೆಂ" ತಲೂ, "ನನ್ನಂಥ ತೇಜಸ್ವಿಲೋಕದ ಪ್ರಾಪ್ತಿಯು ನಳನಿಗೆ ಆಗಲೆಂ" ತಲೂ, ವರಗಳನ್ನು ಕೊಟ್ಟನು. ಯಮನು— "ಅನ್ನರಸವನ್ನೂ, ಧರ್ಮದ ಮೇಲಿನ ಶ್ರದ್ಧೆಯನ್ನೂ ಕೊಟ್ಟನು. ವರುಣನು— "ನಳನು ಇಚ್ಛಿಸಿ ದಲ್ಲಿ ನೀರು ಉತ್ಪನ್ನವಾಗಲೆಂ" ತಲೂ, "ಉತ್ತಮ ಪ್ರಕಾರದ ಸುಗಂಧ ಪುಷ್ಪಮಾಲೆಯು ಪ್ರಾಪ್ತವಾಗಲೆಂ" ತಲೂ ವರಗಳನ್ನು ಕೊಟ್ಟನು.

ಬಳಿಕ ದೇವತೆಗಳು ಸ್ವರ್ಗಕ್ಕೆ ಹೋದರು. ಎಲ್ಲ ರಾಜರು ತಮ್ಮ ತಮ್ಮ ದೇಶಗಳಿಗೆ ಹೋದರು. ಆ ಮೇಲೆ ಭೀಮನು ನಳ–ದಮಯಂತಿಯರ ವಿವಾಹವನ್ನು ಸಮಾರಂಭದಿಂದ ಮಾಡಲು, ನಳನು ಭೀಮನ ಅನುಜ್ಞೆ ಪಡೆದು ತನ್ನ ರಾಜ್ಯಕ್ಕೆ ಹೋಗಿ, ನ್ಯಾಯದಿಂದ ರಾಜ್ಯವಾಳುತ್ತ ದಮಯಂತಿಯೊಡನೆ ಹಲವು ವಿಲಾಸಗಳನ್ನು ಭೋಗಿಸಿದನು. ಉದಾರಾಂತಃಕರಣದ ನಳರಾಜನು ದಮಯಂತಿಯ ಹೊಟ್ಟೆಯಲ್ಲಿ, ಇಂದ್ರಸೇನನೆಂಬ ಹೆಸರಿನ ಮಗನನ್ನೂ, ಇಂದ್ರಸೇನಾ ಎಂಬ ಹೆಸರಿನ ಮಗಳನ್ನೂ ಹಡೆದು, ಯಜ್ಞಯಾಗಾದಿ ವಿಹಿತಕರ್ಮಗಳನ್ನು ಮಾಡುತ್ತ, ಐಶ್ವರ್ಯಸಂಪನ್ನವಾದ ಪೃಥ್ವಿಯನ್ನು ಪಾಲಿಸತೊಡಗಿದನು.

ಹೀಗೆ ಭೀಮಕನ್ಯೆಯಾದ ದಮಯಂತಿಯು ನಳರಾಜನನ್ನು ಮದುವೆಯಾದ ಬಳಿಕ, ದೇವತೆಗಳು ತಮ್ಮ ತಮ್ಮ ಲೋಕಗಳಿಗೆ ಹೋಗುತ್ತಿರುವಾಗ ಹಾದಿಯಲ್ಲಿ ಅವರಿಗೆ, ದ್ವಾಪರನೊಡನೆ ಬರುತ್ತಿರುವ ಕಲಿಯ ಭೆಟ್ಟಿಯಾಯಿತು. ಆಗ ಇಂದ್ರನು ಆ ಕಲಿಯನ್ನು ಕುರಿತು—

ಇಂದ್ರ— ಕಲಿ, ದ್ವಾಪರನನ್ನು ಕರಕೊಂಡು ಎತ್ತ ಹೊರಟೆ?

ಕಲಿ— ದಮಯಂತಿಯ ಸ್ವಯಂವರಕ್ಕೆ ಹೋಗಿ, ನಾನು ಆಕೆಯನ್ನು ಲಗ್ನವಾಗುವೆನು ; ಯಾಕಂದರೆ, ನನ್ನ ಮನಸ್ಸು ಆಕೆಯ ಮೇಲೆ ಕುಳಿತಿರುತ್ತದೆ.

ಇಂದ್ರ ( ನಕ್ಕು ) — ಆ ಸ್ವಯಂವರವು ಆಗಿಹೋಯಿತು. ನಮ್ಮ ಸಮಕ್ಷ ದಮಯಂತಿಯು ನಳರಾಜನನ್ನು ಲಗ್ನವಾದಳು.

ಕಲಿ ( ಸಿಟ್ಟಾಗಿ ) — ದಮಯಂತಿಯು ದೇವತೆಗಳನ್ನು ಬಿಟ್ಟು, ಅವರ ಸಮಕ್ಷ ನಳನೆಂಬ ಮನುಷ್ಯನನ್ನು ಲಗ್ನವಾದದ್ದರಿಂದ, ಆಕೆಗೆ ದೊಡ್ಡ ಶಿಕ್ಷೆಯಾಗುವದು ಯೋಗ್ಯವು.

ಇಂದ್ರ— ನಮ್ಮ ಅನುಜ್ಞೆಯನ್ನು ಪಡೆದೇ ದಮಯಂತಿಯು ನಳರಾಜನನ್ನು ಲಗ್ನವಾಗಿರುವಳು ; ಮತ್ತು ಆದದ್ದೂ ನೆಟ್ಟಗಾಯಿತು ; ಯಾಕಂದರೆ ನಳನು ಸದ್ಗುಣಮಂಡಿತನು, ನಾನಾವಿಧ ವ್ರತಗಳನ್ನು ಮಾಡಿದವನು, ಧರ್ಮಜ್ಞನು, ಯಜ್ಞಗಳಿಂದ ದೇವತೆಗಳನ್ನು ಸಂತೋಷಪಡಿಸುವವನು, ಸತ್ಯವಾದಿಯು, ದೃಢಪ್ರತಿಜ್ಞನು, ಹಿಂಸಾಪರಾಙ್ಮುಖನು ಇರು

ವನು. ಅಂಥವನಿಗೆ ಶಾಪಕೊಡಹೋಗುವವನು, ತಾನಾಗಿ ನಾಶವನ್ನು ಮಾಡಿಕೊಂಡಂತೆಯೇ ಸರಿ.

ಈ ಮೇರೆಗೆ ನುಡಿದು ದೇವತೆಗಳು ಸ್ವರ್ಗಕ್ಕೆ ಹೋದರು. ಆಗ ಕಲಿಯು ದ್ವಾಪರನನ್ನು ಕುರಿತು— " ದ್ವಾಪರಾ, ಸಿಟ್ಟು ಬಿಡುವ ಧೈರ್ಯವು ನನಗೆ ಆಗದಿರುವದರಿಂದ, ನಾನು ನಳನ ಶರೀರದಲ್ಲಿ ಪ್ರವೇಶಿಸಿ, ಆತನನ್ನು ರಾಜ್ಯಭ್ರಷ್ಟನಾಗಮಾಡುವೆನು. ನೀನೂ ಲೆತ್ತಗಳಲ್ಲಿ ಸೇರಿ ನನಗೆ ಸಹಾಯಮಾಡು.

ಕಲಿಯು ಈ ಮೇರೆಗೆ ಪ್ರತಿಜ್ಞೆಮಾಡಿ, ದ್ವಾಪರನೊಡನೆ ನಲನ ಬಳಿಗೆ ಬಂದು, ಆತನಲ್ಲಿ ಪ್ರವೇಶಿಸುವದಕ್ಕಾಗಿ ಹನ್ನೆರಡುವರ್ಷ ಅಲ್ಲಿ ಇದ್ದು, ಆತನ ಹಾದಿಯನ್ನು ನೋಡಿದನು ; ಆದರೆ ಪ್ರವೇಶಕ್ಕೆ ಆಸ್ಪದವು ದೊರೆಯಲಿಲ್ಲ. ಹನ್ನೆರಡುವರ್ಷಗಳ ಮೇಲೆ ಒಂದು ದಿನ ನಳರಾಜನು ಮೂತ್ರ ವಿಸರ್ಜನ ಮಾಡಿ ಕೈಕಾಲು ತೊಳಕೊಳ್ಳದೆ, ಆಚಮನಮಾಡಿ ಸಂಧ್ಯಾವಂದನೆಯನ್ನು ಮಾಡತೊಡಗಿದನು. ಅಷ್ಟೇ ಅನಾಚಾರದ ನೆವದಿಂದ ಕಲಿಯು ಆತನ ದೇಹದಲ್ಲಿ ಪ್ರವೇಶಿಸಿದನು. ಬಳಿಕ ಕಲಿಯು ನಲನ ಬಂಧುವಾದ ಪುಷ್ಕರನ ಬಳಿಗೆಹೋಗಿ ಆತನನ್ನು ಕುರಿತು— " ಪುಷ್ಕರಾ, ನೀನು ನಲನೊಡನೆಜೂಜು ಆಡುನಡೆ. ನಾನು ನಿನಗೆ ಸಹಾಯಕನಾಗಿರುವದರಿಂದ, ನಿನಗೆ ಜಯವಾಗುವದು ನಿಶ್ಚಯವು. ನೀನು ನಳನರಾಜ್ಯವನ್ನು ಗೆದ್ದು, ನಿಶ್ಚಯವಾಗಿ ಆಳುತ್ತೀ. ನಾನು ಕಲಿಯು, ಎತ್ತಿನ ರೂಪವನ್ನು ತಾಳುವೆನು. " ಎಂದು ಹೇಳಿ, ಕಲಿಯು ಎತ್ತು ಆಗಿ ಪುಷ್ಕರನೊಡನೆ ನಡೆದನು. ಆಗ ಪುಷ್ಕರನು ದಮಯಂತಿಯ ಸಮಕ್ಷ ನಳನನ್ನು ಜೂಜಾಡಲಿಕ್ಕೆ ಕರೆಯಲು, ನಳನು ಅಭಿಮಾನಕ್ಕೆ ಬಿದ್ದು ಒಲ್ಲೆನೆನ್ನಲಾರದೆ ಪುಷ್ಕರನೊಡನೆ ಜೂಜು ಆಡತೊಡಗಿದನು. ಪುಷ್ಕರನು ತನ್ನ ಎತ್ತನ್ನೇ ಪಣವಾಗಿ ಹಚ್ಚಿದನು. ಹೀಗೆ ಅವರಿಬ್ಬರು ಬಂಧುಗಳು ಜೂಜಾಡತೊಡಗಲು, ದ್ವಾಪರನು ಲೆತ್ತಗಳಲ್ಲಿ ಪ್ರವೇಶಿಸಿ ಪುಷ್ಕರನಿಗೆ ಅನುಕೂಲವಾಗಿಯೇ ಪಾಸೆಗಳನ್ನು ಕೆಡವುತ್ತಹೋದನು. ಆಗ ನಳನು ತನ್ನ ಯಾವತ್ತು ಸಂಪತ್ತನ್ನು ಒಂದೊಂದಾಗಿ ಕಳೆದುಕೊಳ್ಳಹತ್ತಿದನು. ಕಲಿಪ್ರೇರಣೆಯಿಂದ ನಳನು ಭ್ರಮಿಷ್ಟನಂತೆ ಆದನು. ಆತನಲ್ಲಿ ವಿವೇಕವು ಉಳಿಯಲಿಲ್ಲ. ಪುರಜನರು

ಸ್ವಾಮಿನಿಷ್ಠೆಯಿಂದ ನಳನನ್ನು ದ್ಯೂತದಿಂದ ಬಿಡಿಸಬೇಕೆಂದು ಎರಡು ಸಾರೆ ಬಂದರೂ, ನಳನು ಅವರನ್ನು ದುರ್ಲಕ್ಷಿಸಿ, ಅವರನ್ನು ಕಾಣಲೂ ಇಲ್ಲ. ಆಗ ಅವರು ಪರಿಣಾಮವು ನೆಟ್ಟಗಿಲ್ಲವೆಂದು ಅಂದುಕೊಂಡು ದುಃಖದಿಂದಹೊರಟು ಹೋದರು. ದಮಯಂತಿಯ ಯತ್ನವೂ ಸಾಗದಾಯಿತು. ಹೀಗೆ ನಳ–ಪುಷ್ಕರರ ದ್ಯೂತವು ಎಷ್ಟೋ ತಿಂಗಳು ನಡೆಯಿತು. ಆಗ ದಮಯಂತಿಯು ವಾರ್ಷ್ಣೇಯನೆಂಬ ಸಾರಥಿಯನ್ನು ಕರೆಸಿ– "ವಾರ್ಷ್ಣೇಯಾ, ನೀನು ನಳರಾಜನ ನಂಬಿಗೆಯವನು. ಈಗೊದಗಿದ ಪ್ರಸಂಗವಂತು ಕಠಿಣವಿರುವದು. ಇದರಲ್ಲಿ ನಳರಾಜನ ನಾಶವಾಗುವ ಲಕ್ಷಣವುತೋರುತ್ತದೆ. ಈ ಪ್ರಸಂಗದಲ್ಲಿ ನಳರಾಜನಿಗೆ ನಾನು ದೋಷ ವಿಡುವದಿಲ್ಲ. ಜೂಜಿನ ಹುಚ್ಚೇಅಂತಹದು ; ಆದ್ದರಿಂದ ನೀನು ರಥವನ್ನು ಸಿದ್ಧಮಾಡಿ, ನನ್ನ ಈ ಇಬ್ಬರುಮಕ್ಕಳನ್ನು ಕುಂಡಿನೀಪುರಕ್ಕೆ ಕರೆದೊಯ್ದು ನನ್ನ ತಂದೆಯಬಳಿಯಲ್ಲಿ ಇವರನ್ನು ಇಡು. ನೀನು ನನ್ನ ತಂದೆಯ ಬಳಿಯಲ್ಲಿದ್ದರೂ ಸರಿಯೇ, ಬೇಕಾದಲ್ಲಿಗೆ ಹೋಗಿ ನಿನ್ನ ಉಪಜೀವನ ಸಾಗಿಸಿಕೊಂಡರೂ ಸರಿಯೇ" ಎಂದು ಹೇಳಿದಳು. ಆಗ ವಾರ್ಷ್ಣೇಯನು ಅಮಾತ್ಯ–ಮಂತ್ರಿಗಳೊಡನೆ ಆಲೋಚಿಸಿ, ಅವರ ಒಪ್ಪಿಗೆಯಿಂದ ಇಂದ್ರಸೇನನನ್ನೂ, ಇಂದ್ರಸೇನೆಯನ್ನೂ ಕರಕೊಂಡು ಕುಂಡಿನೀಪುರಕ್ಕೆ ಹೋಗಿ ಅಲ್ಲಿ ಆ ರಾಜಪುತ್ರರನ್ನೂ, ನಳನ ರಥವನ್ನೂ ಬಿಟ್ಟು, ತಾನು ಅಯೋಧ್ಯೆಯ ಅರಸನಾದ ಋತುಪರ್ಣನ ಆಶ್ರಯಕ್ಕೆ ಹೋಗಿ, ಆತನ ಸಾರಥ್ಯಕರ್ಮಮಾಡಿ ಉಪಜೀವನ ಸಾಗಿಸಿಕೊಳ್ಳಹತ್ತಿದನು.

# ೩ನೇ ಪ್ರಕರಣ - ದಮಯಂತಿಯ ತ್ಯಾಗ

ಸಾರಥಿಯಾದ ವಾರ್ಷ್ಣೇಯನು ಹೋದಬಳಿಕ, ಇತ್ತ ನಳರಾಜನು ಪುಷ್ಕರನಿಗೆ ಎಲ್ಲ ಸಂಪತ್ತನ್ನೂ, ರಾಜ್ಯವನ್ನೂ ಸೋತು, ಪಣಕ್ಕೆ ಹಚ್ಚಲಿಕ್ಕೆ ಏನೂ ಇಲ್ಲದ್ದರಿಂದ ಸುಮ್ಮನೆ ಕುಳಿತನು. ಆಗ ಪುಷ್ಕರನು ಉಪಹಾಸದಿಂದ ನಳನನ್ನು ಕುರಿತು—" ಯಾಕೆ? ಸುಮ್ಮನೆಕುಳಿತೆ? ಜೂಜು ಆರಂಭವಾಗಲಿ! ನೀನು ಎಲ್ಲ ಸಂಪತ್ತನ್ನೂ, ರಾಜ್ಯವನ್ನೂ ಕಳಕೊಂಡಿದ್ದರೂ, ನಿನ್ನ ಹೆಂಡತಿ ದಮಯಂತಿಯೊಬ್ಬಳು ಇರುವಳು, ಬೇಕಾದರೆ ಆಕೆಯನ್ನು ಪಣಕ್ಕೆ ಹಚ್ಚು " ಎಂದು ಹೇಳಿದನು. ಆಗ ನಳನು ಕ್ರೋಧಸಂತಪ್ತನಾಗಿ, ತನ್ನ ಮೈಮೇಲಿನ ವಸ್ತ್ರಾಭರಣಗಳನ್ನು ತೆಗೆದಿಟ್ಟು, ಉಟ್ಟ ಒಂದೇ ವಸ್ತ್ರದಿಂದ ಅಲ್ಲಿಂದ ಹೊರಟನು. ದಮಯಂತಿಯೂ ಅವನನ್ನು ಹಿಂಬಾಲಿಸಿದಳು. ಪುಣ್ಯಶ್ಲೋಕನಾದ ನಳರಾಜನು ಮೂರುದಿವಸ ಪಟ್ಟಣದ ಹೊರಗೆ ಇದ್ದನು ; ಆದರೆ ಪುಷ್ಕರನು—" ನಳನಿಗೆ ಯಾವದೊಂದು ಬಗೆಯಿಂದ ಅನುಕೂಲರಾಗಿ ನಡೆಯುವವರು ಮರಣಶಿಕ್ಷೆಗೆ ಗುರಿಯಾಗುವರೆಂ" ದು ಡಂಗುರ ಸಾರಿದ್ದರಿಂದ, ಸತ್ಕಾರಕ್ಕೆ ಯೋಗ್ಯನಾದ ನಳನನ್ನು ಯಾರೂ ಸತ್ಕರಿಸಲಿಲ್ಲ. ನಳನು ಕೇವಲ ಜಲಾಹಾರದಿಂದ ಮೂರುದಿವಸಗಳನ್ನು ಕಳೆದು, ಕ್ಷುಧಾತೃಪ್ತಿಗಾಗಿ ಗಡ್ಡೆ-ಗೆಣಸು-ಹಣ್ಣುಗಳನ್ನು ಹುಡುಕುವದಕ್ಕಾಗಿ ಅರಣ್ಯವನ್ನು ಸೇರಿದನು. ದಮಯಂತಿಯೂ ಆತನನ್ನು ಹಿಂಬಾಲಿಸಿ ನಡೆದಳು. ಹೀಗೆ ಅವರು ಅರಣ್ಯದಲ್ಲಿ ಸಾಗಿರುವಾಗ, ಬಂಗಾರದ ಗರಿಗಳುಳ್ಳ ಕೆಲವು ಹಕ್ಕಿಗಳು ನಳನ ಕಣ್ಣಿಗೆ ಬಿದ್ದವು. ಆಗ ನಳನು, ಈ ಹಕ್ಕಿಗಳನ್ನು ಹಿಡಿದರೆ ತಮ್ಮ ಆಹಾರವಾಗುವದಲ್ಲದೆ, ಬಂಗಾರವೂ ದೊರೆಯುವದೆಂದು ತಿಳಿದು, ತನ್ನ ಉಟ್ಟ ವಸ್ತ್ರವನ್ನು ಕಳೆದು ಅದನ್ನು ಆ ಹಕ್ಕಿಗಳ ಮೇಲೆ ಒಗೆದು ಅವನ್ನು ಹಿಡಿಯಹೋದನು. ಅಷ್ಟರಲ್ಲಿ ಆ ಹಕ್ಕಿಗಳು ನಳನ ವಸ್ತ್ರದೊಡನೆ ಆಕಾ

ಶಕ್ಕೆ ಹಾರಿಹೋದವು. ಆಗ ನಾಚಿಕೆಯಿಂದ ತಲೆಬಾಗಿಸಿ ನಿಂತುಕೊಂಡಿದ್ದ ನಳನನ್ನು ಕುರಿತು ಆ ಹಕ್ಕಿಗಳು—“ಎಲೈ ನಳರಾಜಾ, ನಾವು ಲೆತ್ತಗಳು. ನೀನು ವಸ್ತ್ರಸಹಿತನಾಗಿದ್ದದ್ದು ನಮಗೆ ಸಹನವಾಗದ್ದರಿಂದ, ಹಕ್ಕಿಗಳಾಗಿ ಅದನ್ನು ಅಪಹರಿಸಿದ್ದೇವೆ.” ಎಂದು ನುಡಿದು, ಹಾರಿಹೋದವು. ಆಗ ನಳನು ಈ ಸಂಗತಿಯನ್ನು ದಮಯಂತಿಯ ಮುಂದೆ ಹೇಳಿ, ಆಕೆಯನ್ನು ಕುರಿತು—“ಸುಂದರೀ, ನಾನು ಹೀಗೆ ವಸ್ತ್ರಹೀನನಾಗಿ ಅತ್ಯಂತ ಸಂಕಟಕ್ಕೆ ಗುರಿಯಾಗಿರುವೆನು; ಆದ್ದರಿಂದ ನಿನಗೆ ಹಿತದ ಮಾತನ್ನು ಹೇಳುವೆನು ಕೇಳು.” ಎಂದು ನುಡಿದು, ಕುಂಡಿನೀಪುರಕ್ಕೆ ಹೋಗುವ ಹಾದಿಯನ್ನು ಆಕೆಗೆ ಹೇಳತೊಡಗಿದನು. “ಈ ಸಂಕಟಕಾಲದಲ್ಲಿ ನೀನು ಬಹಳ ದುಃಖಗಳನ್ನು ಅನುಭವಿಸಬೇಕಾಗುವದರಿಂದ, ನೀನು ತವರ ಮನೆಗೆ ಹೋಗೆಂ”ಬ ಭಾವವನ್ನು ಆತನು ವ್ಯಕ್ತಮಾಡಿದನು. ಹೀಗೆ ಮೇಲೆ ಮೇಲೆ ಕುಂಡಿನೀಪುರದ ಹಾದಿಯ ಹೇಳುವದನ್ನು ಕೇಳಿ, ದುಃಖದಿಂದ ದಮಯಂತಿಯ ಕಣ್ಣುಗಳು ನೀರಿನಿಂದ ತುಂಬಿದವು. ಆಗ ಆ ಸಾಧ್ವಿಯು ಪತಿಯನ್ನು ಕುರಿತು ಅತ್ಯಂತ ಕ್ಷೀಣಸ್ವರದಿಂದ—

ದಮಯಂತಿ—ಎಲೈ ಪೃಥ್ವೀಪತಿಯೇ, ನಿನ್ನ ವಿಚಾರವನ್ನೂ, ನನ್ನ ಮನಸ್ಸಿನ ವಿಚಾರಗಳನ್ನೂ ಕುರಿತು ಆಲೋಚಿಸತೊಡಗಿದಕೂಡಲೆ, ಪುನಃ ಪುನಃ ನನ್ನ ಮನಸ್ಸು ಖಿನ್ನವಾಗಿ, ನನ್ನ ಅವಯವಗಳು ಶಿಥಿಲವಾಗಿ ಹೋಗುತ್ತವೆ! ರಾಜ್ಯಭ್ರಷ್ಟನಾಗಿ ವಸ್ತ್ರಹೀನನಾಗಿರುವ ನೀನು ಹಸಿವೆಯಿಂದ ಕಂಗಾಲಾಗಿರುವಾಗ, ನಾನು ನಿನ್ನನ್ನು ನಿರ್ಜನವಾದ ಅರಣ್ಯದಲ್ಲಿ ಬಿಟ್ಟು ಹೋಗುವದು ಶಕ್ಯವಾದರೂ ಇರುವದೆಯೋ? ನಾನು ನಿನ್ನ ಬಳಿಯಲ್ಲಿದ್ದರೆ ಕಾಲಕಾಲಕ್ಕೆ ನಿನಗೊದಗುವ ಕಷ್ಟವನ್ನು ಪರಿಹರಿಸುವೆನು. ಯಾವಬಗೆಯ ದುಃಖದಲ್ಲಿಯೇ ಆಗಲಿ, ಗಂಡನಿಗೆ ಹೆಂಡತಿಯಂತಹ ವೈದ್ಯಸಮ್ಮತವಾದ ಎರಡನೆಯ ಔಷಧವಿಲ್ಲವೆಂಬದನ್ನು, ನಾನು ನಿಜವಾಗಿ ನಿನಗೆ ಹೇಳುವೆನು.

ನಳ—ಎಲೈ ಸುಂದರೀ ದಮಯಂತೀ, ನಿನ್ನ ಮಾತು ಸತ್ಯವು; ಅಂತೇ ನಾನು ನಿನ್ನನ್ನು ಎಂದೂ ತ್ಯಜಿಸುವದಿಲ್ಲ. ಹೀಗಿರಲು, ನಿನಗೆ

ಈ ಸಂಶಯವು ಯಾಕೆ ಉಂಟಾಯಿತು? ಎಲೈ ಅನಿಂದಿತೇ, ನಾನು ಪ್ರಾಣಗಳನ್ನಾದರೂ ಬಿಟ್ಟೇನು, ನಿನ್ನನ್ನು ಬಿಡಲಿಕ್ಕಿಲ್ಲ.

ದಮಯಂತಿ—ಮಹಾರಾಜಾ, ಹಾಗಿದ್ದರೆ ನನಗೆ ವಿದರ್ಭದೇಶದ ಹಾದಿಯನ್ನು ಯಾಕೆ ಹೇಳುತ್ತೀ? ನೀನು ನನ್ನನ್ನು ಬಿಡುವದಿಲ್ಲೆಂಬ ಮಾತು ನನಗೂ ಗೊತ್ತಿದೆ; ಆದರೆ ನಾನು ದುಃಖಗಳನ್ನು ಸಹಿಸಲಾರೆನೆಂಬ ಕನಿಕರದಿಂದ ನೀನು ನನ್ನನ್ನು ಎಲ್ಲಿ ಬಿಡುವೆಯೋ ಎಂದು ನನ್ನ ಕ್ಷುದ್ರಮನಸ್ಸು ಶಂಕಿಸುತ್ತಿರುತ್ತದೆ. ಮಹಾರಾಜಾ, ನಾನು ತವರ ಮನೆಗೆ ಹೋಗಬೇಕೆಂದು ನೀನು ಇಚ್ಛಿಸುತ್ತಿದ್ದರೆ, ನಾವಿಬ್ಬರೂ ಹೋಗೋಣವೆಂದರಾಯಿತು. ವಿದರ್ಭರಾಜನು ನಿನ್ನನ್ನು ಬಹುಮಾನಿಸುವನು. ಅಲ್ಲಿ ನೀನು ಸುಖದಿಂದ ಇರಬಹುದು.

ದಮಯಂತಿಯ ಈ ಮಾತುಗಳನ್ನು ಕೇಳಿ ನಳನು—" ದಮಯಂತೀ, ನಿನ್ನ ತಂದೆಯ ರಾಜ್ಯವು ನನ್ನ ರಾಜ್ಯವೇ ಎಂಬದರಲ್ಲಿ ಸಂಶಯವಿಲ್ಲ; ಆದರೆ ಐಶ್ವರ್ಯಸಂಪನ್ನನಾಗಿ ಅಲ್ಲಿಗೆ ಹೋಗುತ್ತಿದ್ದ ನಾನು, ಈಗ ರಾಜ್ಯಭ್ರಷ್ಟನಾಗಿ ಹೇಗೆ ಹೋದೇನು? ಈ ಮಾತು ಸರ್ವಥಾ ಆಗದು" ಎಂದು ಹೇಳಿದನು. ಆಗ ದಮಯಂತಿಯು ತನ್ನ ಅರ್ಧ ವಸ್ತ್ರವನ್ನು ಕೊಡಲು, ಅದನ್ನು ಉಟ್ಟುಕೊಂಡು, ನಳನು ದಮಯಂತಿಯೊಡನೆ ಅರಣ್ಯದಲ್ಲಿ ಸಂಚರಿಸತೊಡಗಿದನು. ಆಗ ಅಲ್ಲಿ ಒಂದು ಹಾಳಮನೆಯು ಆತನ ಕಣ್ಣಿಗೆ ಬಿದ್ದಿತು. ನಳನು ದಮಯಂತಿಯೊಡನೆ ಅಲ್ಲಿಗೆ ಹೋಗಿ ನೆಲದ ಮೇಲೆ ಕುಳಿತುಕೊಳ್ಳಲು, ಬಹಳವಾಗಿ ದಣಿದದ್ದರಿಂದ ದಮಯಂತಿಯು ತೂಕಡಿಸಹತ್ತಿದಳು. ಆಗ ನಳನು ದಮಯಂತಿಯೊಡನೆ ಮಲಗಿಕೊಂಡಕೂಡಲೆ, ದಮಯಂತಿಗೆ ಗಾಢವಾದ ನಿದ್ರೆಯು ಹತ್ತಿತು; ಆದರೆ ದುಃಖಪೀಡಿತನಾದ ನಳನಿಗೆ ತನ್ನ ರಾಜ್ಯ, ತನ್ನ ಆಪ್ತೇಷ್ಟರು, ತನ್ನ ವನವಾಸ, ದಮಯಂತಿಯ ಕಷ್ಟ ಇವುಗಳ ನೆನಪಾಗಿ ನಿದ್ದೆ ಹತ್ತಲಿಲ್ಲ. ಆ ಭೂಪತಿಯು ಹೀಗೆ ಅನೇಕ ವಿಚಾರಗಳಲ್ಲಿ ತೊಡಗಿರುವಾಗ, ಕಲಿಪ್ರೇರಣೆಯಿಂದ ದಮಯಂತಿಯನ್ನು ತ್ಯಜಿಸುವ ವಿಚಾರವು ಆತನ ಮನಸ್ಸಿನಲ್ಲಿ ಉತ್ಪನ್ನವಾಯಿತು. ಆಗ ಆತನು ಮನಸ್ಸಿನಲ್ಲಿ—" ಈ ಸುಂದರಿಯು, ನಾನು ಇದ್ದಂತೆ ಇರುವವಳಾದದ್ದರಿಂದ

ಬಹಳ ಕಷ್ಟಗಳನ್ನು ಭೋಗಿಸಬೇಕಾಗುವದು. ನಾನು ಈಕೆಯನ್ನು ಇಲ್ಲಿ ಬಿಟ್ಟು ಹೋಗಿ ಬಿಟ್ಟರೆ, ಈಕೆಯು ತನ್ನ ಆಪ್ತರನ್ನು ಹೊಂದಿ ಸುಖಿಸಬಹುದು; ಆದರೆ ನನ್ನ ವಿಯೋಗದಲ್ಲಿ ಈಕೆಗೆ ಸುಖವಾದೀತೆಂದಾದರೂ ಹೇಗೆ ಹೇಳಬೇಕು? ಅಲ್ಲದೆ, ಈ ಘೋರಾರಣ್ಯದಲ್ಲಿ ಒಬ್ಬಳನ್ನೇ ಬಿಟ್ಟು ನಾನು ಹೋದರೆ, ಈಕೆಯು ಜೀವಿಸಬಹುದೇ? ಈಕೆಯು ಮತ್ತೂ ಹೆಚ್ಚು ಸಂಕಟಕ್ಕೆ ಗುರಿಯಾಗಬಹುದಲ್ಲ. ಅಥವಾ ಮಹಾಪತಿವ್ರತೆಯಾದ ಈಕೆಯನ್ನು ಮುಟ್ಟಲು ಯಾವ ಪ್ರಾಣಿಯು ಸಮರ್ಥವಾಗಬಹುದು? ಈಕೆಯ ಸುತ್ತುಮುತ್ತು ಧರ್ಮದ ಆವರಣವಿರುವದರಿಂದ, ಈಕೆಗೆ ಯಾವ ಭಯವೂ ಉಂಟಾಗಲಿಕ್ಕಿಲ್ಲ."

ಈ ಮೇರೆಗೆ ಬಗೆಬಗೆಯ ವಿಚಾರಗಳು ನಳರಾಜನಲ್ಲಿ ಉತ್ಪನ್ನವಾಗುತ್ತಿರಲು, ಕಲಿಪ್ರೇರಣೆಯಿಂದ ಆತನು ದಮಯಂತಿಯನ್ನು ತ್ಯಜಿಸಬೇಕೆಂತಲೇ ನಿಶ್ಚಯಿಸಿದನು; ಆದರೆ ಏಕವಸ್ತ್ರದಿಂದ ಮಲಗಿದ್ದ ತಾನು, ದಮಯಂತಿಯನ್ನು ಬಿಟ್ಟು ಹೇಗೆ ಹೋಗಬೇಕೆಂಬ ವಿಚಾರವು ಆತನಲ್ಲಿ ಉತ್ಪನ್ನವಾಯಿತು. ತನ್ನ ಅರ್ಧವಸ್ತ್ರವನ್ನು ಹೇಗೆ ಹರಿದುಕೊಳ್ಳಬೇಕೆಂದು ಆತನು ಆ ಮನೆಯಲ್ಲಿ ಅತ್ತಿತ್ತ ಹುಡುಕುತ್ತಿರಲು, ಮೂಲೆಯಲ್ಲಿ ಒಂದು ಖಡ್ಗವು ಆತನ ಕಣ್ಣಿಗೆ ಬಿದ್ದಿತು. ಆಗ ಆತನು ಅದರಿಂದ ತನ್ನ ಅರ್ಧ ವಸ್ತ್ರವನ್ನು ಹರಿದುಕೊಂಡು, ನಿದ್ದೆಹತ್ತಿದ ದಮಯಂತಿಯನ್ನು ಬಿಟ್ಟು ಮನೆಯಿಂದ ಹೊರಬಿದ್ದನು; ಆದರೆ ದಮಯಂತಿಯನ್ನು ಬಿಟ್ಟು ಹೋಗುವದು ಆಗದ್ದರಿಂದ, ಆತನು ಪುನಃ ದಮಯಂತಿಯ ಬಳಿಗೆ ಬರುವನು, ಪುನಃ ಹೊರಬಿದ್ದು ಹೋಗುವನು. ದಮಯಂತಿಯ ವಿಷಯದ ನಳನ ಪ್ರೇಮವನ್ನು ಕಲಿಯು ಜಗ್ಗಿಹಿಡಿಯಲು, ನಳನು ಮನೆಯಿಂದ ಹೊರಬೀಳುವನು; ಕಲಿಯು ಸಡಿಲುಬಿಟ್ಟಕೂಡಲೆ ಆತನು ಮತ್ತೆ ದಮಯಂತಿಯ ಬಳಿಗೆ ಬರುವನು. ಹೀಗೆ ಆತನು ಜೋಕಾಲಿಯಂತೆ ಎಡತಾಕುತ್ತಿರುವಾಗ, ಕಡೆಗೆ ಕಲಿಯ ಪ್ರತಾಪವು ಹೆಚ್ಚಿ, ನಲನು ನಿದ್ದೆಹತ್ತಿ ಮಲಗಿದ ದಮಯಂತಿಯನ್ನು ಬಿಟ್ಟು, ನಿಷ್ಕಾರಣವಾಗಿ ಅಲ್ಲಿಂದ ಓಡಿ ಹೋದನು. ಕಲಿಪ್ರೇರಣೆಯಿಂದ ಆತನ ವಿಚಾರವು ನಷ್ಟವಾಗಿ ಹೋಗಿತ್ತು.

# ೪ನೇ ಪ್ರಕರಣ-ದಮಯಂತಿಯ ವಿಲಾಪ

ಹೀಗೆ ನಳನು ದಮಯಂತಿಯನ್ನು ಬಿಟ್ಟುಹೋದಬಳಿಕ ಆಕೆಯು ಎಚ್ಚತ್ತು ನೋಡಲು, ನಳನು ಇದ್ದಿಲ್ಲ. ಆಗ ಆಕೆಯು ಅಂಜಿ—"ಮಹಾರಾಜಾ, ಮಹಾರಾಜಾ," ಎಂದು ಗಾಬರಿಯಾಗಿ ಕೂಗತೊಡಗಿದಳು! ಆದರೂ ಆತನು ಬಾರದಿರುವದನ್ನು ನೋಡಿ—" ಹಾಯ! ಹಾಯ! ಹೇನಾಥಾ, ಹೇಸ್ವಾಮಿನ್! ನನ್ನನ್ನು ಬಿಟ್ಟು ಎಲ್ಲಿಗೆ ಹೋದೆ? ಈ ನಿರ್ಜನವಾದ ಅರಣ್ಯದಲ್ಲಿ ನನಗೆ ಅಂಜಿಕೆಯು ಬರುತ್ತದೆ. ಮಹಾರಾಜಾ, ನೀನು ಎಂದೂ ಸುಳ್ಳಾಡುವವನಲ್ಲ; ಅಂದ ಬಳಿಕ "ನಿನ್ನನ್ನು ಎಂದೂ ಬಿಡುವದಿಲ್ಲವೆಂ"ದು ನನಗೆ ಹೇಳಿದ ನೀನು, ಈಗ ಎಲ್ಲಿಗೆ ಹೋದೆ? ಅನುಕೂಲೆಯಾದ ಹೆಂಡತಿಯನ್ನು ತ್ಯಜಿಸುವದು ಯೋಗ್ಯವೆ? ನಾನು ಮಾಡಿದ ಅಪರಾಧವಾದರೂ ಏನು? ಅಪರಾಧಮಾಡಿದವರು ಎರಡನೆಯವರು, ಆದರೆ ಅದರ ಫಲವನ್ನು ನಾನು ಅನುಭವಿಸಬೇಕೋ? ನೀನು ಸ್ವಯಂವರಕಾಲಕ್ಕೆ ಲೋಕಪಾಲರ ಸಮಕ್ಷ ಆಡಿದ ಮಾತುಗಳನ್ನು ನಡಿಸಲು ನೀನು ಸಮರ್ಥನಾಗಿರುತ್ತೀ. ಎಲೈ ನರಶ್ರೇಷ್ಠಾ, ನಿನ್ನ ಈ ವಿನೋದವನ್ನು ಇಷ್ಟಕ್ಕೆ ಸಾಕುಮಾಡು. ರಾಜಾ, ಈಗ ನೀನು ನನಗೆ ಕಂಡೆ; ಎಲ್ಲಿಯೋ ಬಳ್ಳಿಗಳ ಮರೆಗೆ ಅಡಿಗಿಕೊಂಡಂತೆ ತೋರುತ್ತದೆ; ನನ್ನ ಸಂಗಡ ಯಾಕೆ ಮಾತಾಡುವದಿಲ್ಲ? ರಾಜಾ, ನನ್ನ ಸಲುವಾಗಿ, ಅಥವಾ ಬೇರೆಯವರ ಸಲುವಾಗಿ ನನಗೆ ದುಃಖವಾಗುವದಿಲ್ಲ; ಆದರೆ ಒಬ್ಬನೇ ನೀನು ಎಷ್ಟುಕಷ್ಟಪಡುವೆಯೋ ಎಂದು ನನಗೆ ದುಃಖವಾಗುತ್ತದೆ. ಪಾಪಶೂನ್ಯವಾದ ಅಂತಃಕರಣವುಳ್ಳ ನಳನಿಗೆ ಈ ಸ್ಥಿತಿಯನ್ನುಂಟುಮಾಡಿದ ಪಾಪಿಯು, ನನಗಿಂತಲೂ ಹೆಚ್ಚು ದುಃಖಪಡಲಿ. ಆ ಪಾಪಿಯು ತನ್ನ ಇಡಿಯ ಆಯುಷ್ಯದಲ್ಲಿ ಸುಖಿಯಾಗಬೇಡ.

ಈಮೇರೆಗೆ ಶಾಪಕೊಟ್ಟು ದಮಯಂತಿಯು ಪತಿಯನ್ನು ಹುಡುಕುತ್ತ ಅತ್ತಿತ್ತ ಸಂಚರಿಸತೊಡಗಿದಳು. ಅಷ್ಟರಲ್ಲಿ ಮನುಷ್ಯರನ್ನು ನುಂಗುವ ಒಂದು ಹೆಬ್ಬಹಾವು ದಮಯಂತಿಯನ್ನು ನುಂಗತೊಡಗಿತು. ಆಗ ದಮಯಂತಿಯು ಶೋಕಮಗ್ನಳಾದಳು; ಆದರೆ ಆಕೆಯು ತನ್ನ ಸಲುವಾಗಿ ಶೋಕಪಡುತ್ತಿರಲಿಲ್ಲ. ಆಕೆಯು ದೊಡ್ಡ ದನಿಯಿಂದ—"ಎಲೈ ನೈಷಧಾ, ಈ ಅಜಗರವು ನನ್ನನ್ನು ನುಂಗಿಬಟ್ಟರೆ, ಮುಂದೆ ನನ್ನ ನೆನಪು ನಿನಗಾದಾಗ ನೀನು ಎಷ್ಟು ದುಃಖಪಡುವೆಯೋ ಏನೊ! ಹೀಗೆ ಹಾವು ನನ್ನನ್ನು ನುಂಗುತ್ತಿದ್ದರೂ, ನನ್ನನ್ನು ಬಿಡಿಸಲಿಕ್ಕೆ ನೀನು ಬರಲೊಲ್ಲೆಯಲ್ಲ! ನೀನು ಅರಣ್ಯದಲ್ಲಿ ಹಸಿವು ನೀರಡಿಕೆಗಳಿಂದ ಬಳಲಿದರೆ, ನಿನ್ನ ಆರೈಕೆ ಮಾಡುವರಾರು? " ಎಂದು ಶೋಕಿಸುತ್ತಿರಲು, ಒಬ್ಬ ಬೇಟೆಗಾರನು ಆಕೆಯ ಬಳಿಗೆ ಬಂದು, ಶಸ್ತ್ರದಿಂದ ಅಜಗರವನ್ನು ಸೀಳಿ, ದಮಯಂತಿಯನ್ನು ಪ್ರಾಣಸಂಕಟದಿಂದ ಮುಕ್ತಮಾಡಿದನು; ಆದರೆ ದಮಯಂತಿಯ ಸೌಂದರ್ಯವು ಆತನನ್ನು ಕಾಮಪೀಡಿತನಾಗ ಮಾಡಿತು. ಆಗ ಆತನು—"ಎಲೈ ಪ್ರೇಮಶಾಲಿನೀ, ನೀನು ಯಾರು? ಯಾರವಳು? ಈ ವನದಲ್ಲಿ ಹೇಗೆ ಬಂದೆ? ನಿನಗೆ ಈ ಸಂಕಟವು ಹೇಗೆ ಪ್ರಾಪ್ತವಾಯಿತು? " ಎಂದು ಕೇಳಲು, ದಮಯುಂತಿಯು ತನ್ನ ಎಲ್ಲ ವೃತ್ತಾಂತವನ್ನು ಹೇಳಿದಳು. ಆಗ ಕಾಮಪೀಡಿತನಾದ ಆ ಬೇಟೆಗಾರನು ಸವಿಮಾತುಗಳಿಂದ ಆಕೆಯನ್ನು ರಮಿಸತೊಡಗಿದನು. ಆಗ ದಮಯಂತಿಯು ಆತನ ದುಷ್ಟ ಭಾವವನ್ನರಿತು, ಆತನೊಡನೆ ಮಾತಾಡುವದರಿಂದ ಪ್ರಯೋಜನವಿಲ್ಲೆಂದು ತಿಳಿದು, ಸಿಟ್ಟಿನಿಂದ ಉರಿಯುತ್ತ— "ನಾನು ನೈಷಧನ ಹೊರತು ಅನ್ಯ ಪುರುಷನನ್ನು ಮನಸ್ಸಿನಲ್ಲಿ ತಾರದಿರುವದು ನಿಜವಿರುವದರಿಂದ, ಈ ನೀಚ ಬೇಡನು ಮರಣಹೊಂದಲಿ. " ಎಂದು ನುಡಿದಳು. ಕೂಡಲೆ ವ್ಯಾಧನು ಅಗ್ನಿಯಿಂದ ಸುಟ್ಟುಹೋದಂತೆ ಸತ್ತು ನೆಲಕ್ಕೆ ಬಿದ್ದನು.

ಹೀಗೆ ವ್ಯಾಧನ ನಾಶವಾದ ಬಳಿಕ ದಮಯಂತಿಯು, ಹಾಳಿಯ ಹದ್ದುಗಳ ಧ್ವನಿಯು ತುಂಬಿದ ಆ ಘೋರಾರಣ್ಯದ ಕಡೆಗೆ ಹೋಗತೊಡಗಿದಳು. ಆ ಅರಣ್ಯದಲ್ಲಿ ಸಿಂಹ, ಹುಲಿ, ಕರಡಿ ಮೊದಲಾದ ಹಲವು

ಜಾತಿಯ ಕ್ರೂರಮೃಗಗಳು ಸಂಚರಿಸುತ್ತಿದ್ದವು; ಮ್ಲೇಂಛರು, ಕಳ್ಳರು ಆ ಅರಣ್ಯದಲ್ಲಿ ವಾಸಿಸುತ್ತಿದ್ದರು. ವಿವಿಧ ವೃಕ್ಷಗಳಿಂದಲೂ, ಬಳ್ಳಿಗಳಿಂದಲೂ ಆ ಅರಣ್ಯವು ನಿಬಿಡವಾಗಿತ್ತು. ಅಲ್ಲಿ ವಿವಿಧ ಪಕ್ಷಿಗಳು ಧ್ವನಿಮಾಡುತ್ತಿದ್ದವು. ಕಾಡಹಂದಿಗಳ, ಕರಡಿಗಳ, ವನ ಸರ್ಪಗಳ ಹಿಂಡಗಳು ಆಕೆಯ ಕಣ್ಣಿಗೆ ಬೀಳುತ್ತಿದ್ದವು. ಆದರೂ ಆ ವಿದರ್ಭ ಕನ್ಯೆಯು ತೇಜ, ಕೀರ್ತಿ, ಕಾಂತಿ, ಸದಾಚಾರ ಇವುಗಳಿಂದ ಯುಕ್ತಳಾದದ್ದರಿಂದ. ಆಕೆಯು ನಿರ್ಭಯದಿಂದ ಆ ವನದಲ್ಲಿ ನಳನನ್ನು ಹುಡುಕುತ್ತ ಸಂಚರಿಸತೊಡಗಿದಳು. ಆಗ ಆಕೆಯ ದೇಹವು ನಳನ ವಿಯೋಗದುಃಖದಿಂದ ಉರಿಯತೊಡಗಲು, ಆಕೆಯು ಒಂದು ಶಿಲಾತಲದಮೇಲೆ ಕುಳಿತುಕೊಂಡು—"ಎಲೈ ಮಹಾಬಾಹೋ, ನಿಷಧಾಧಿರಾಜಾ, ಎತ್ತ ಹೋದೆ? ನಾಥಾ, ಇನ್ನು ನಿಶ್ಚಯವಾಗಿ ನನ್ನ ನಾಶವಾಗುವದು. ಅದೋ ನೋಡು, ಒಂದು ಸಿಂಹವು ಬಾಯಿತೆರೆದು ನನ್ನ ಕಡೆಗೇ ಬರುತ್ತಿರುವದು! ಈಗ ನೀನು ನನ್ನ ಸಂರಕ್ಷಣವನ್ನು ಮಾಡಬಾರದೇನು? ಸಾಧ್ವಿಯಾದ ದಮಯಂತಿಯು ಇಷ್ಟು ಹಲಬುತ್ತಿರಲು, ನೀನು ಮಾತಾಡಬಾರದೆ? "ನೀವು ನನ್ನ ನಳರಾಜನನ್ನು ನೋಡಿದಿರಾ?" ಎಂದು ಈ ಘೋರಾರಣ್ಯದಲ್ಲಿ ನಾನು ಯಾರನ್ನು ಕೇಳಲಿ? "ಇಗೋ, ನೀನು ಹುಡುಕುತ್ತಿರುವ ನಳರಾಜನು ಇಲ್ಲಿ ಇರುವನು ನೋಡು" ಎಂದು ಯಾರಾದರೂ ನುಡಿಯುವ ಮಧುರವಾಣಿಯು ನನ್ನ ಕಿವಿಗೆ ಬಿದ್ದಿತೇನು? ಅಗೋ, ಆ ಕ್ರೂರ ಹುಲಿಯು ಬಾಯಿತೆರೆದು ನನ್ನ ಕಡೆಗೇ ಬರುತ್ತಿರುವದು, ಅದನ್ನು ಕೇಳುವೆನು. ಎಲೈ ವನರಾಜಾ, ನೀನು ನನ್ನ ನಳರಾಜನನ್ನು ನೋಡಿದೆಯಾ? ನೀನು ನನಗೆ ಉತ್ತರವನ್ನು ಕೊಡದಿದ್ದರೆ, ನನ್ನನ್ನು ತಿಂದುಬಿಡು. ಈ ಅರಣ್ಯವು ನನ್ನ ದುಃಖವನ್ನು ಕೇಳಿಯೂ ನನ್ನನ್ನು ಸಮಾಧಾನಪಡಿಸುವದಿಲ್ಲವಲ್ಲ! ಈ ಪರ್ವತಗಳೂ ಸುಮ್ಮನೆ ನಿಂತುಬಿಟ್ಟವೆಯಲ್ಲ! ಈ ಹಳ್ಳ-ನದಿಗಳೂ ನನ್ನ ಹಂಗಿಲ್ಲದೆ ಹರಿದು ಹೋಗುತ್ತಿವೆಯಲ್ಲ! ಹಾ ಹಾ ನಾಥಾ, ನೀನು ತಟ್ಟನೆ ಬಂದು ನನಗೆ ದರ್ಶನ ಕೊಡಬಾರದೇ? "ಎಲೈ ವೈದರ್ಭಿ" ಎಂದು ಸ್ಪಷ್ಟ ಧ್ವನಿಯಿಂದ ನನ್ನನ್ನು ಕರೆಯಬಾರದೇ?

ಈಮೇರೆಗೆ ದಮಯಂತಿಯು ಶೋಕಿಸುತ್ತ ಉತ್ತರ ದಿಕ್ಕಿಗೆ ಸಾಗಿದಳು. ಆಕೆಯು ಹಾಗೆ ಮೂರುದಿನ ಹಾದಿಯ ನಡೆದಮೇಲೆ, ಸುಂದರ

ಉಪವನಗಳಿಂದ ಶೋಭಿಸುವ ಒಂದು ಆಶ್ರಮವನ್ನು ಆಕೆಯು ನೋಡಿದಳು. ಅಲ್ಲಿ ವಶಿಷ್ಠ, ಅತ್ರಿ, ಭೃಗುಋಷಿಗಳಂಥ ಘನವಾದ ಯೋಗ್ಯತೆಯ ಬಹುಜನ ತಪೋಧನರು ವಾಸಿಸುತ್ತಿದ್ದರು. ದಮಯಂತಿಯು ಅವರ ಬಳಿಗೆ ಹೋಗಿ ಅವರನ್ನು ನಮಸ್ಕರಿಸಿ ವಿನಯದಿಂದ ನಿಂತುಕೊಳ್ಳಲು, ಆ ತಾಪಸ ಶ್ರೇಷ್ಠರು ಆಕೆಯನ್ನು ಬಹುಮಾನದಿಂದ ಸತ್ಕರಿಸಿ-"ಕುಳಿತುಕೊಳ್ಳು, ನೀನು ಬಂದ ಕೆಲಸವೇನು?" ಎಂದು ಕೇಳಿದರು. ಆಗ ದಮಯಂತಿಯು ಮೊದಲಿನಿಂದ ಕಡೆತನಕ ತನ್ನ ಯಾವತ್ತೂ ವೃತ್ತಾಂತವನ್ನು ಹೇಳಲು, ಋಷಿಗಳು ಆ ಸಾಧ್ವಿಯನ್ನು ಕುರಿತು-"ಎಲೈ ಕಲ್ಯಾಣೀ, ನಿನಗೆ ಒಳ್ಳೆಯ ದಿನಗಳು ಬೇಗನೆ ಬರುವವು. ತಪೋಬಲದ ಯೋಗದಿಂದ ನಾವು ನೋಡುತ್ತಿರಲು, ನಿನ್ನ ಪತಿಯು ಯಾವತ್ತು ವಿಪತ್ತುಗಳಿಂದ ಮುಕ್ತನಾಗಿ, ಬೇಗನೆ ನಿನ್ನ ಕಣ್ಣಿಗೆ ಬೀಳುವನೆಂದು ನಮಗೆ ತೋರುತ್ತದೆ." ಎಂದು ಹೇಳಿ, ಅಗ್ನಿಹೋತ್ರ, ಆಶ್ರಮ ಇವುಗಳೊಡನೆ ಆ ಎಲ್ಲ ಋಷಿಗಳು ಅಲ್ಲಿಯೇ ಅದೃಶ್ಯರಾದರು. ಇದೆಲ್ಲ ದಮಯಂತಿಗೆ ಕನಸಿನಂತೆ ತೋರಿತು. ಈ ಆಶ್ಚರ್ಯವನ್ನು ಕುರಿತು ಆಕೆಯು ವಿಚಾರ ಮಾಡುತ್ತಿರಲು, ಏನೂ ತೋಚದೆ ಪತಿಯ ವಿಯೋಗ-ಶೋಕಮಗ್ನಳಾದ ಆಕೆಯು ದೀನಳಾದಳು; ಆಕೆಯ ಮೋರೆಯು ಬಾಡಿತು. ಆಗ ಆಕೆಯು ಒಂದು ವಿಶಾಲವಾದ ಅಶೋಕವೃಕ್ಷವನ್ನು ನೋಡಿ-"ಎಲೈ ಅಶೋಕಾ, ನನ್ನ ಪತಿಯ ಸುದ್ದಿಯನ್ನು ಹೇಳಿ ನನ್ನ ಶೋಕವನ್ನು ದೂರಮಾಡಿ "ಅಶೋಕ" ಎಂಬ ನಿನ್ನ ಹೆಸರನ್ನು ಸಾರ್ಥಕಮಾಡಿಕೊಳ್ಳಬಾರದೆ? ಎಂದು ಕೇಳಲು, ಆ ಅಶೋಕ ವೃಕ್ಷವು ಏನೂ ಮಾತಾಡದ್ದರಿಂದ, ಆಕೆಯು, ಮತ್ತೊಂದು ಭಯಂಕರ ಅರಣ್ಯವನ್ನು ಸೇರಿ, ಅಲ್ಲಿ ವಿವಿಧ ವೃಕ್ಷಗಳನ್ನೂ, ಪಶುಪಕ್ಷಿಗಳನ್ನೂ, ಪರ್ವತ ನದಿಗಳನ್ನೂ ನೋಡಿದಳು.

ಆ ವನದಲ್ಲಿ ದಮಯಂತಿಯು ಸಂಚರಿಸುತ್ತಿರಲು, ಒಂದು ವ್ಯಾಪಾರಸ್ಥರ ಗುಂಪು ನದಿದಾಟಿ ಹೋಗುತ್ತಿರುವದು ಆಕೆಯ ಕಣ್ಣಿಗೆ ಬಿದ್ದಿತು. ಆ ಗುಂಪಿನಲ್ಲಿ ಅನೇಕ ಆನೆಗಳು, ಕುದುರೆಗಳು, ರಥಗಳು ಇದ್ದವು. ಆ ದೊಡ್ಡ ಜನಸಮೂಹವನ್ನು ನೋಡಿ, ದಮಯಂತಿಯು ಸಮಾಧಾನ

ಪಟ್ಟು ಆ ಗುಂಪಿನ ಆಶ್ರಯದಿಂದ ತಾನು ಮುಂದಕ್ಕೆ ಸಾಗಬೇಕೆಂದು ನಿಶ್ಚಯಿಸಿ, ಆ ಗುಂಪನ್ನು ಸೇರಿದಳು. ಆಗ ಆಕೆಯು ಕೆಲವರಿಗೆ ಹುಚ್ಚಿಯಂತೆ ತೋರಿದಳು; ಕೆಲವರಿಗೆ ಪಿಶಾಚದಂತೆ ಕಂಡಳು. ಕೆಲವರು ಆಕೆಯ ವಿಷಯದಲ್ಲಿ ದಯಾಲುಗಳಾಗಿ—"ಅಮ್ಮಾ, ನೀನು ಯಾರು? ಯಾರವಳು? ಇಲ್ಲಿ ಘೋರವನದಲ್ಲಿ ಸಂಚರಿಸುವ ಕಾರಣವೇನು?" ಎಂದು ಕೇಳಿದರು. ಆಗ ದಮಯಂತಿಯು ತನ್ನ ವೃತ್ತಾಂತವನ್ನು ಹೇಳಿ—"ನನ್ನ ಆ ನಳರಾಜನನ್ನು ನೋಡಿದಿರಾ?" ಎಂದು ಅವರನ್ನು ಕೇಳಿದಳು. ಅದನ್ನು ಕೇಳಿ, ಜನರ ಆ ಪ್ರಚಂಡ ಗುಂಪಿನ ಮುಖ್ಯಸ್ಥನು—"ಎಲೈ ಕಲ್ಯಾಣೀ, ನನ್ನ ಮಾತನ್ನು ಕೇಳು. ನಾನು ಈ ಗುಂಪಿನ ಮುಖ್ಯಸ್ಥನು. ನನಗೆ ಸಾರ್ಥವಾಹನೆನ್ನುವರು. ನಳನೆಂಬ ಮನುಷ್ಯನನ್ನು ನಾವು ನೋಡಿರುವದಿಲ್ಲ. ಈ ಘೋರಾರಣ್ಯದಲ್ಲಿ ಮನುಷ್ಯರನ್ನು ನೋಡಿದ್ದೆಂದರೆ, ನಿನ್ನೊಬ್ಬಳನ್ನೇ! ಇದು ವ್ಯಾಪಾರಸ್ಥರ ಗುಂಪು. ನಾವು ಲಾಭದ ಇಚ್ಛೆಯಿಂದ ಚೇದಿದೇಶಾಧಿಪತಿಯಾದ ಸುಬಾಹುವಿನ ದೇಶಕ್ಕೆ ಹೋಗುವೆವು" ಎಂದು ಹೇಳಿದನು. ಆಗ ಪತಿಯನ್ನು ನೋಡಲಿಚ್ಛಿಸುವ ದಮಯಂತಿಯು, ಆ ವ್ಯಾಪಾರಸ್ಥರೊಡನೆಯೇ ಹೋಗಬೇಕೆಂದು ನಿಶ್ಚಯಿಸಿ, ಅವರೊಡನೆ ಸಾಗಿದಳು. ಹೀಗೆ ಅವರೊಡನೆ ಮಾರ್ಗಕ್ರಮಣಮಾಡುತ್ತಿರಲು, ಒಂದು ನಿರ್ಮಲವಾದ ಮನೋಹರ ಸರೋವರವು ಅವರಿಗೆ ಹತ್ತಿತು. ಅವರು ಬಹಳವಾಗಿ ದಣಿದದ್ದರಿಂದ, ಆ ಸರೋವರದ ದಂಡೆಯ ಮೇಲೆ ಇಳಿದುಕೊಂಡು, ಸ್ನಾನಪಾನಾದಿಗಳನ್ನು ನಡೆಸಿದರು. ಮುಂದೆ ಮಧ್ಯರಾತ್ರಿಯಾಗಲು, ಎಲ್ಲ ಕಡೆಗೂ ಶಾಂತತೆಯು ಪ್ರಸ್ಥಾಪಿತವಾಗಿರುವಾಗ, ಪರ್ವತಗಳ ಮೇಲಿಂದ ಕಾಡಾನೆಗಳದೊಂದು ಹಿಂಡು ಬಂದು, ಆ ವ್ಯಾಪಾರಸ್ಥರ ಸಾಕಿದ ಆನೆಗಳಮೇಲೆ ಬಿದ್ದಿತು. ಆಗ ಮಲಗಿ ನಿದ್ದೆಹೋಗಿದ್ದ ಜನರಲ್ಲಿ ಕಾಡಾನೆಗಳ ತುಳತದಿಂದ ಎಷ್ಟೋ ಜನರು ಸತ್ತರು; ಎಚ್ಚತ್ತವರು ಓಡಹತ್ತಲು, ಆನೆಗಳು ಅವರನ್ನು ಹಿಡಿದು ಕೊಲ್ಲಹತ್ತಿದವು. ಕೆಲವರು ಗಿಡವೇರಿದರು, ಕೆಲವರು ಬಳ್ಳಿಬಡಕಲಮರೆಗೆ ಅಡಗಿಕೊಂಡರು. ಹೀಗೆ ವ್ಯಾಪಾರಸ್ಥರ ನಾಶವಾದದ್ದಲ್ಲದೆ, ಅವರ ಮುತ್ತು-ರತ್ನಾದಿಗಳ ಸರಕೂ ನಾಶವಾಯಿತು. ಈ ಅನರ್ಥಕ್ಕೆ

ತಮ್ಮ ಸಂಗಡ ಬರುತ್ತಲಿದ್ದ ಪಿಶಾಚಸ್ವರೂಪದ ಹೆಂಗಸೇ ಕಾರಣಳೆಂದು ಬಹುಜನ ವ್ಯಾಪಾರಸ್ಥರು ತಿಳಕೊಂಡು, ದಮಯಂತಿಯನ್ನು ತಮ್ಮ ಸಂಗಡ ಕರಕೊಂಡು ಹೋಗದಾದರು! ಆಗ ದಮಯಂತಿಯು ತನ್ನ ದುರ್ದೈವವನ್ನು ಸ್ಮರಿಸಿ ಬಹಳವಾಗಿ ದುಃಖಿಸಿದಳು. ಆಕೆಯು ತನ್ನೊಳಗೆ—"ಕಾಲವು ಒದಗಿದ ಹೊರತು ಮರಣವು ಒದಗುವದಿಲ್ಲೆಂಬ ಮಾತೇ ನಿಜವು. ನನಗೆ ಇನ್ನೂ ಮರಣಕಾಲವು ಒದಗಿ ಬಾರದ್ದರಿಂದಲೇ, ಇಷ್ಟು ಜನ ವ್ಯಾಪಾರಸ್ಥರು ಸತ್ತರೂ ನಾನು ಸಾಯಲಿಲ್ಲ. ಮನುಷ್ಯನಿಗೊದಗುವ ಪ್ರಸಂಗಗಳೆಲ್ಲ ದೈವಯೋಗದಿಂದ ಒದಗುತ್ತವೆಂಬದೇ ನಿಶ್ಚಯವು. ನಾನಂತು ಬಾಲ್ಯದಾರಭ್ಯ ಯಾವ ಪಾಪಕೃತ್ಯವನ್ನೂ ಮಾಡಿಲ್ಲ; ಒಬ್ಬರಿಗೆ ತೊಂದರೆಯನ್ನು ಕೊಟ್ಟಿಲ್ಲ; ಅಂದಬಳಿಕ ಇಂಥ ಕಷ್ಟದ ಪ್ರಸಂಗವು ನನಗೆ ಯಾಕೆ ಬರಬೇಕು? ಇದಕ್ಕೆ ನನ್ನ ಪ್ರಾಚೀನ ಕರ್ಮವು ಕಾರಣವಾಗಿರಬಹುದೋ? ಅಥವಾ ಸ್ವಯಂವರದಲ್ಲಿ ನಾನು ದೇವತೆಗಳನ್ನು ತಿರಸ್ಕರಿಸಿ, ನಳರಾಜನನ್ನು ಲಗ್ನವಾದದ್ದರ ಫಲವು ಇದು ಆಗಿರಬಹುದೋ?

---

# ೫ನೇ ಪ್ರಕರಣ—ನಳನ ಅಜ್ಞಾತವಾಸ

ಈ ನೋರೆಗೆ ದಮಯಂತಿಯು ವಿಲಾಪಮಾಡುತ್ತ, ವ್ಯಾಪಾರಸ್ಥರ ಗುಂಪಿನಲ್ಲಿದ್ದ ವೇದಪಾರಂಗತ ಬ್ರಾಹ್ಮಣರ ಸಂಗಡ ಹೋಗಹತ್ತಿದಳು. ಆದಿನ ರಾತ್ರಿ ಆಕೆಯು ಚೇದಿದೇಶದ ರಾಜನಾದ ಸುಬಾಹುವಿನ ಪಟ್ಟಣಕ್ಕೆ ಬಂದುಮುಟ್ಟಿದಳು. ಆಕೆಯನ್ನು ಜನರು ಹುಚ್ಚಿಯಂತೆ ಕಂಡರು. ಹುಡುಗರು ಗುಂಪುಗೂಡಿ ಆಕೆಯ ಬೆನ್ನು ಹತ್ತಿದರು. ಹೀಗೆ ಆಕೆಯು ಬೀದಿ ಹಿಡಿದು ಹೋಗುತ್ತಿರುವಾಗ, ರಾಜಮಾತೆಯು ಆ ದಮಯಂತಿಯನ್ನು

ನೋಡಿ, ತನ್ನ ದಾಸಿಯನ್ನು ಕುರಿತು—"ಹೋಗು, ಆ ಸ್ತ್ರೀಯನ್ನು ಕರಕೊಂಡು ಬಾ. ಜನರು ಆಕೆಗೆ ತೊಂದರೆ ಕೊಡುತ್ತಿದ್ದು, ಆಕೆಯು ಅನ್ಯರ ಆಶ್ರಯವನ್ನು ಇಚ್ಛಿಸುವಂತೆ ತೋರುತ್ತದೆ. ಆಕೆಯು ಹುಚ್ಚಿಯಂತೆ ತೋರಿದರೂ, ಆಕೆಯ ಪ್ರಕಾಶವು ನಮ್ಮ ಅರಮನೆಯನ್ನು ಬೆಳಗುವಂತೆಇರುವದು." ಎಂದುಹೇಳಿದಳು. ಬಳಿಕ ದಾಸಿಯುದಮಯಂತಿಯನ್ನು ರಾಜಮಾತೆಯ ಬಳಿಗೆಕರೆದೊಯ್ಯಲು, ಆ ರಾಜಮಾತೆಯು ಆಶ್ಚರ್ಯಪಟ್ಟು ಆಕೆಯನ್ನುಕುರಿತು—"ಅವ್ವಾ, ನೀನುದುಃಖದಿಂದ ವ್ಯಾಪ್ತಳಾಗಿದ್ದರೂ, ನಿನ್ನ ಶರೀರವು ಬಹು ಉತ್ಕೃಷ್ಟವಾಗಿರುವದು. ನೀನು ದೇವಕನ್ಯೆಯಂತೆ ನನಗೆ ತೋರುತ್ತೀ; ಯಾಕಂದರೆ ನಿನಗೆ ಯಾರ ಸಹಾಯವಿಲ್ಲದಿದ್ದರೂ, ಅನ್ಯ ಪುರುಷರಿಗೆ ನೀನು ಅಂಜುವದಿಲ್ಲ; ಆದ್ದರಿಂದ ನೀನು ಯಾರು? ಯಾರವಳು? ನನ್ನ ಮುಂದೆ ಹೇಳು" ಎಂದು ಕೇಳಲು, ದಮಯಂತಿಯು—"ನಾನು ಪತಿಯನ್ನು ಅನುಸರಿಸಿ ನಡೆಯುವ, ಹಾಗು ಬೇಕಾದಲ್ಲಿ ವಾಸಿಸುವ ಒಬ್ಬ ಮನುಷ್ಯಜಾತಿಯ ಸೈರಂಧ್ರಿಯಿರುತ್ತೇನೆ. ನನ್ನ ಪತಿಯು ಅನಂತಗುಣಸಂಪನ್ನನಿದ್ದು, ಕಾರಣಾಂತರದಿಂದ ಆತನು ನನ್ನನ್ನು ಅಗಲಿಹೋಗಿರುವದರಿಂದ, ನಾನು ಆತನನ್ನು ಹುಡುಕುತ್ತಿರುವೆನು; ಆದರೆ ಈವರೆಗೂ ನನಗೆ ಆತನು ದೊರೆತಿರುವದಿಲ್ಲ." ಎಂದು ಹೇಳಲು, ಆ ರಾಜಮಾತೆಯು—"ಎಲೈ ಕಲ್ಯಾಣೀ, ನೀನು ಏನೂ ಚಿಂತೆ ಮಾಡಬೇಡ; ನನ್ನ ಆಶ್ರಯದಲ್ಲಿರು. ನಿನ್ನ ಯೋಗದಿಂದ ನನಗೆ ಬಹಳ ಆನಂದವಾಗಿರುವದು. ನನ್ನ ಸೇವಕರು ನಿನ್ನ ಪತಿಯನ್ನು ಹುಡುಕಬಹುದು; ಅಥವಾ ಆತನೇ ಅಲ್ಲಿ ಇಲ್ಲಿ ತಿರಗುತ್ತ ಅಕಸ್ಮಾತ್ತಾಗಿ ಇಲ್ಲಿಗೆ ಬರಬಹುದು." ಎಂದು ಹೇಳಲು, ದಮಯಂತಿಯು ರಾಜಮಾತೆಯನ್ನು ಕುರಿತು—"ಎಲೈ ವೀರಮಾತೇ, ನನ್ನ ಕೆಲವು ನಿಯಮಗಳಿರುವವು. ಅವನ್ನು ನೀನು ನಡಿಸಿದರೆ ನಿನ್ನ ಬಳಿಯಲ್ಲಿರುವೆನು. ಆ ನಿಯಮಗಳು ಯಾವವೆಂದರೆ—ನಾನು ಉಚ್ಛಿಷ್ಟವನ್ನು ಎಂದೂ ತಿನ್ನಲಾರೆನು. ನಾನು ಯಾರ ಕಾಲನ್ನೂ ತೊಳೆಯಲಿಕ್ಕಿಲ್ಲ; ಯಾವ ಪುರುಷನ ಸಂಗಡಲೂ ಮಾತಾಡಲಿಕ್ಕಿಲ್ಲ; ನನ್ನ ವಿಷಯವಾಗಿ ಯಾರಾದರೂ ಇಚ್ಛಿಸಿವರೆ, ಅವರನ್ನು ನೀನು ದಂಡಿಸಬೇಕು; ಹೀಗೆ ಪುನಃ ಪುನಃ ಅವರು ಇಚ್ಛಿಸಿ

ದರೆ ಅವರನ್ನು ಕೊಲ್ಲಬೇಕು; ಪತಿಯ ಶೋಧಕ್ಕಾಗಿ ನಾನು ಬ್ರಾಹ್ಮಣರ ಸಂಗಡ ಮಾತ್ರ ಮಾತಾಡುವೆನು. ಈ ನಿಯಮಗಳನ್ನು ನೀನು ನಡಿಸಿದರೆ, ನಾನು ನಿನ್ನ ಬಳಿಯಲ್ಲಿರುವೆನು. ಇದಕ್ಕೆ ಒಪ್ಪಿಕೊಳ್ಳದ ಯಾರ ಮನೆಯಲ್ಲಿಯೂ ನಾನು ಇರುವದಿಲ್ಲ." ಎಂದು ಹೇಳಿದಳು. ಆದಕ್ಕೆ ರಾಜಮಾತೆಯು ಸಂತೋಷದಿಂದ ಒಡಂಬಟ್ಟು, ತನ್ನ ಮಗಳಾದ ಸುನಂದೆಯನ್ನು ಕರೆದು—"ಸುನಂದೇ, ಈ ಸೈರಂಧ್ರಿಯು ದೇವತೆಗಳಿಗೆ ಸಮಾನಳಾಗಿರುವಳು. ಈಕೆಯು ನಿನಗೆ ಸಖಿಯಾಗಲು ಯೋಗ್ಯಳಿರುತ್ತಾಳೆ. ನೀನು ಬೇಸರಮಾಡದೆ ಯಾವಾಗಲೂ ಈಕೆಯ ಸಹವಾಸದಲ್ಲಿರು" ಎಂದು ಹೇಳಿದಳು. ಅದನ್ನು ಕೇಳಿ ಸುನಂದೆಯು ಆನಂದಭರಿತಳಾಗಿ ದಮಯಂತಿಯನ್ನು ಕರಕೊಂಡು ತನ್ನ ಮನೆಗೆ ಹೋದಳು. ಆಗ ಎಲ್ಲ ಬಗೆಯ ಅನುಕೂಲತೆಯಾದದ್ದರಿಂದ, ದಮಯಂತಿಯು ಖೇದಪಡದೆ ಅಲ್ಲಿ ಆನಂದದಿಂದ ವಾಸಿಸತೊಡಗಿದಳು.

ನಳರಾಜನು ದಮಯಂತಿಯನ್ನು ಬಿಟ್ಟು ಹೋದ ಬಳಿಕ, ದೊಡ್ಡ ಅರಣ್ಯದಲ್ಲಿ ದಾವಾಗ್ನಿಯು ಉರಿಯುತ್ತಿರುವದನ್ನು ಆತನು ನೋಡಿದನು. ಆ ಅಗ್ನಿಯಲ್ಲಿ—"ಎಲೈ ನಳಾ, ಪುಣ್ಯಶ್ಲೋಕಾ, ಬೇಗ ಬಾ! ಬೇಗ ಬಾ!" ಎಂದು ಯಾರೋ ಮೇಲಿಂದಮೇಲೆ ಕೂಗುತ್ತಿರುವದು ಆತನ ಕಿವಿಗೆ ಕೇಳಿಸತೊಡಗಿತು. ಆಗ ನಳನು—"ಹೆದರಬೇಡ, ಹೆದರಬೇಡ" ಎಂದು ಕೂಗುತ್ತ ಆ ಅಗ್ನಿಯನ್ನು ಪ್ರವೇಶಿಸಿದನು. ಆಗ ಅಲ್ಲಿ ಒಂದು ಹಾವು ಸುರುಳಿಸುತ್ತಿಕೊಂಡು ಬಿದ್ದುಕೊಂಡು, ಒಂದೇಸವನೆ ಒದರುತ್ತಿತ್ತು. ದಾವಾಗ್ನಿಯ ಭಯದಿಂದ ಗದಗುಟ್ಟಿ ನಡಗುತ್ತಿದ್ದ ಆ ಹಾವು ಕೈಜೋಡಿಸಿ ನಳನನ್ನು ಕುರಿತು—"ರಾಜಾ, ನಾನು ಕರ್ಕೋಟಕನೆಂಬ ಹೆಸರಿನ ನಾಗನಿದ್ದೇನೆ. ನಾನು ಮಹರ್ಷಿ ನಾರದರನ್ನು ಮೋಸಗೊಳಿಸಿದ್ದರಿಂದ, ಅವರು ಸಿಟ್ಟಾಗಿ ನನಗೆ—"ಎಲೈ ನಾಗಾ, ನಳನು ನಿನ್ನನ್ನು ಎತ್ತಿಕೊಂಡು ಹೋಗುವವರೆಗೆ ಸ್ಥಾವರ ಪದಾರ್ಥದಂತೆ ನೀನು ಬಿದ್ದಲ್ಲಿ ಬಿದ್ದುಕೊಂಡಿರು." ಎಂದು ಶಾಪಕೊಟ್ಟದ್ದರಿಂದ, ನನಗೆ ಉಲುಕಲಿಕ್ಕೂ ಬಾರದಾಗಿದೆ. ದಾವಾಗ್ನಿಯಂತು ಸುಡುತ್ತ ಬರತೊಡಗಿರುವದು; ಆದ್ದರಿಂದ ನೀನು ನನ್ನನ್ನು ಎತ್ತಿಕೊಂಡುಹೋಗು. ನಿನಗೆ ಎತ್ತಲಿಕ್ಕೆ ಬರುವಹಾಗೆ

ನಾನು ಹಗುರಾಗುತ್ತೇನೆ. ” ಎಂದು ನುಡಿದು, ಅದು ಒಂದು ಅಂಗುಲ ಪ್ರಮಾಣವಾಯಿತು. ಆಗ ನಳನು ಅದನ್ನು ಎತ್ತಿಕೊಂಡು ದಾವಾಗ್ನಿ ಯಿಲ್ಲದಲ್ಲಿ ಅದನ್ನು ಒಯ್ದು ಇಟ್ಟನು. ಆಗ ಕರ್ಕೋಟಕನು ನಳನಿಗೆ—“ನಳರಾಜಾ, ನೀನು ಹೆಜ್ಜೆಗಳನ್ನು ಎಣಿಸುತ್ತ ಕೆಲವು ಹೆಜ್ಜೆಗಳನ್ನಿಡು” ಎಂದು ಹೇಳಿತು. ಆಗ ನಳನು ಹತ್ತು ಹೆಜ್ಜೆಗಳನ್ನು ಎಣಿಸಿದಕೂಡಲೆ, ಆ ಸರ್ಪವು ನಳನನ್ನು ಕಚ್ಚಲು, ಕೂಡಲೆ ಅವನ ರೂಪವು ಬದಲಾಯಿತು. ಅದನ್ನು ನೋಡಿ ನಳನು ಆಶ್ಚರ್ಯಪಟ್ಟನು. ಆಗ ಕರ್ಕೋಟಕನು ನಳನಿಗೆ ಪ್ರತ್ಯಕ್ಷ ದರ್ಶನಕೊಟ್ಟು, ಆತನನ್ನು ಕುರಿತು—“ ನಳರಾಜಾ, ಜನರು ನಿನ್ನನ್ನು ಗುರುತಿಸಬಾರದೆಂದು ತಿಳಿದು, ನಿನ್ನ ಸ್ವರೂಪವನ್ನು ನಾನು ಗುಪ್ತಮಾಡಿ ಬಿಟ್ಟಿರುವೆನು. ಎಲೈ ನಳಾ, ನಿನ್ನನ್ನು ಕಷ್ಟಪಡಿಸಿದ ಕಲಿಯು, ನಿನ್ನ ಶರೀರದಲ್ಲಿ ನನ್ನ ವಿಷದಮೂಲಕ ಬಹಳ ಕಷ್ಟಪಡುತ್ತ ವಾಸಿಸಬೇಕಾಗುವದು. ರಾಜಾ, ನನ್ನ ಅನುಗ್ರಹದಿಂದ ನಿನಗೆ ಘೋರ ವ್ಯಾಘ್ರದಿಂದಾಗಲಿ, ಬ್ರಹ್ಮಜ್ಞಋಷಿಯಿಂದಾಗಲಿ ಭಯವಿಲ್ಲವು; ವಿಷದಿಂದ ನಿನಗೆ ಉಪದ್ರವವಾಗಲಾರದು ; ಯುದ್ಧದಲ್ಲಿ ನೀನು ಯಾವಾಗಲೂ ಜಯವನ್ನು ಸಂಪಾದಿಸುವೆ. ರಾಜಾ, ನೀನು ಇಂದು ಇಲ್ಲಿಂದ ಹೊರಟು “ ಬಾಹುಕ ” ನೆಂಬ ಹೆಸರಿನ ಸಾರಥಿಯಾಗಿ ಆಯೋಧ್ಯೆಯ ಋತುಪರ್ಣರಾಜನ ಬಳಿಗೆ ಹೋಗು. ಆತನು ಅಕ್ಷವಿದ್ಯೆಯಲ್ಲಿ ಪ್ರವೀಣನಿರುವನು. ನೀನು ಅಶ್ವವಿದ್ಯೆಯನ್ನು ಆತನಿಗೆ ಕಲಿಸಿ, ಆತನಿಂದ ಅಕ್ಷವಿದ್ಯೆಯನ್ನು ಕಲಿತುಕೋ. ಅಂದರೆ, ನಿನ್ನ ಕಲ್ಯಾಣವಾಗಿ, ನೀನು ಹೆಂಡಿರು ಮಕ್ಕಳನ್ನು ಕೂಡಿಕೊಂಡು, ಸುಖದಿಂದ ರಾಜ್ಯವಾಳುವೆ; ನೀನು ಶೋಕಪಡಬೇಡ. ನಿನಗೆ ಮೂಲಸ್ವರೂಪವು ಬರಬೇಕೆಂದು ಇಚ್ಛೆಯಾದಾಗ ನನ್ನ ಸ್ಮರಣಮಾಡಿ, ಇಗೋ, ಈ ವಸ್ತ್ರಗಳನ್ನು ಧರಿಸು.” ಎಂದು ಹೇಳಿ, ನಳನಿಗೆ ಕರ್ಕೋಟಕನು ಎರಡು ವಸ್ತ್ರಗಳನ್ನು ಕೊಟ್ಟು ಅಲ್ಲಿಯೇ ಗುಪ್ತನಾದನು.

ಬಳಿಕ ನಳನು ಕರ್ಕೋಟಕನ ಹೇಳಿಕೆಯಂತೆ ಹತ್ತನೆಯ ದಿವಸ ಋತುಪರ್ಣರಾಜನ ಬಳಿಗೆ ಹೋಗಿ ಆತನನ್ನು ಕುರಿತು—“ಎಲೈ ರಾಜಾ, ನಾನು ಬಾಹುಕನೆಂಬ ಹೆಸರಿನವನು. ಕುದುರೆ ನಡೆಸುವ ಕೆಲಸದಲ್ಲಿ

ನನಗೆ ಸರಿಯಾದವರು ಈ ಪೃಥ್ವಿಯಲ್ಲಿ ಯಾರೂ ಇಲ್ಲವು; ಅಲ್ಲದೆ, ಉತ್ತಮ ಅಡಿಗೆ ಮಾಡಲಿಕ್ಕೂ ನನಗೆ ಬರುತ್ತದೆ; ಬೇರೆ ಚಾತುರ್ಯದ ಕೆಲಸಗಳೂ ನನಗೆ ಬರುವವು; ಆದ್ದರಿಂದ ಋತುಪರ್ಣರಾಜಾ, ನನಗೆ ನೀನು ಆಶ್ರಯವನ್ನು ಕೊಡಬೇಕು.'' ಎಂದು ಕೇಳಿದನು. ಅದಕ್ಕೆ ಋತುಪರ್ಣನು—''ಬಾಹುಕಾ, ನೀನು ನನ್ನಲ್ಲಿರು, ನಿನಗೆ ಕಲ್ಯಾಣವಾಗಲಿ. ನೀನು ಎಲ್ಲ ಕೆಲಸಗಳನ್ನು ಮಾಡುತ್ತ ಹೋಗು. ಅದರಲ್ಲಿ, ವೇಗದಿಂದ ಗಮನಮಾಡುವಲ್ಲಿ ನನಗೆ ಉತ್ಸಾಹವು ವಿಶೇಷವಾಗಿರುವದರಿಂದ, ಆ ವಿಷಯದಲ್ಲಿ ನೀನು ಹೆಚ್ಚು ಮನಸ್ಸು ಹಾಕು. ಇದರಿಂದ ನನ್ನ ಕುದುರೆಗಳು ವೇಗಶಾಲಿಗಳಾಗುವವು. ಇನ್ನುಮೇಲೆ ನೀನು ನನ್ನ ಕುದುರೆಗಳ ಅಧ್ಯಕ್ಷನಾಗು. ನಿನಗೆ ಹತ್ತುಸಾವಿರ ಸುವರ್ಣನಾಣ್ಯಗಳ ತಲಬು ದೊರೆಯುವದು. ಮತ್ತು ನನ್ನ ಸಾರಥಿಗಳಾದ, ವಾರ್ಷ್ಣೇಯ, ಹಾಗು ಜೀವಲ ಇವರು ಪ್ರತಿದಿನ ನಿನ್ನ ಸೇವಕರಾಗಿ ನಡೆದುಕೊಳ್ಳುವರು." ಎಂದು ಹೇಳಿದನು. ಆಗ ನಳರಾಜನು ಋತುಪರ್ಣನ ಮನೆಯಲ್ಲಿ ಸನ್ಮಾನದಿಂದ ಇರಹತ್ತಿದನು; ಆದರೂ ದಮಯಂತಿಯ ದುಃಖವನ್ನು ಆತನು ಮರೆತಿದ್ದಿಲ್ಲ; ಮೇಲೆ ಮೇಲೆ ಆಕೆಯನ್ನು ನೆನಿಸುತ್ತಿದ್ದನು; ಮತ್ತು ಮಲಗುವಾಗ ಆತನು ಒಂದು ಶ್ಲೋಕವನ್ನು ಅನ್ನುತ್ತಿದ್ದನು. ಅದರ ತಾತ್ಪರ್ಯವೇನಂದರೆ—'' ಪಾಪ! ಆ ಬಡವೆಯು ಹಸಿವೆ–ನೀರಡಿಕೆಗಳಿಂದ ಪೀಡಿತಳಾಗಿರುವಾಗ, ದಣಿದುಹೋಗಿ ಎಲ್ಲಿ ಮಲಗಿರಬಹುದು? ಅಥವಾ ಆ ಮೂರ್ಖನನ್ನು ನೆನಿಸುತ್ತ ನೆನಿಸುತ್ತ ಆಕೆಯು ಯಾರಲ್ಲಿ ಹೋಗಿ ಇರುತ್ತಿರಬಹುದು?

# ೬ನೆಯ ಪ್ರಕರಣ—ನಳನ ಶೋಧ.

ಹೀಗೆ ನಳನ ಶತ್ರುಗಳು ಆತನ ರಾಜ್ಯವನ್ನು ಹರಣ ಮಾಡಿದ ಬಳಿಕ ಆ ನಳರಾಜನೂ, ಆತನ ಹೆಂಡತಿಯಾದ ದಮಯಂತಿಯೂ ಎರಡನೆಯವರಲ್ಲಿ ಆಳಾಗಿ ಇರುತ್ತಿರಲು, ಭೀಮನು ಅಳಿಯನಾದ ನಳನನ್ನೂ, ಮಗಳಾದ ದಮಯಂತಿಯನ್ನೂ ಹುಡುಕುವದಕ್ಕಾಗಿ ಬ್ರಾಹ್ಮಣರನ್ನು ದಿಕ್ಕು ದಿಕ್ಕಿಗೆ ಕಳಿಸಿದನು. ನಳ–ದಮಯಂತಿಯರನ್ನು ಹುಡುಕಿ ಕರೆಕೊಂಡು ಬಂದರೆ, ಹೇರಳ ಹಣ ಕೊಡುವೆನೆಂದು ಆತನು ಪ್ರಸಿದ್ಧಮಾಡಿದನು. ಅವರನ್ನು ಹುಡುಕಿ ಸುದ್ದಿಯನ್ನು ಹೇಳುವವರಿಗೂ ವಿಪುಲ ದ್ರವ್ಯಕೊಡುವೆನೆಂದು ಭೀಮನು ಹೇಳಿದನು. ಆಗ ಬ್ರಾಹ್ಮಣರು ನಾಲ್ಕೂ ಕಡೆಗೆ ದಕ್ಷತೆಯಿಂದ ಆ ನಳ–ದಮಯಂತಿಯರನ್ನು ಹುಡುಕಿದರು; ಆದರೆ ಯಾರಿಗೂ ಅವರಿಬ್ಬರ ಗೊತ್ತು ಹತ್ತಲಿಲ್ಲ. ಮುಂದೆ ಅವರಲ್ಲಿಯ ಸುದೇವನೆಂಬ ಬ್ರಾಹ್ಮಣನು ಚೇದಿದೇಶಕ್ಕೆ ಹೋಗಿರುವಾಗ, ಅಲ್ಲಿ ಅರಮನೆಯಲ್ಲಿ ಪುಣ್ಯಾಹವಾಚನೆಯು ನಡೆದಿರಲು, ಸುನಂದೆಯ ಬಳಿಯಲ್ಲಿ ದಮಯಂತಿಯು ನಿಂತುಕೊಂಡಿರುವದನ್ನು ಆತನು ನೋಡಿದನು. ಮೊದಮೊದಲು ಆತನಿಗೆ ದಮಯಂತಿಯ ಗುರುತು ಮಸಮಸಕಾಗಿ ಹತ್ತಿತು; ಆಗ ಆತನು ದಿಟ್ಟಿಸಿ ಆಕೆಯನ್ನು ನೋಡಲು, ಆಕೆಗಿರುವ ಮಚ್ಛದ ಗುರುತಿನಿಂದ, ಈಕೆಯು ದಮಯಂತಿಯೆಂದೇ ಆತನು ನಿಶ್ಚಯಿಸಿದನು. ಆಗ ಸುದೇವನು ದಮಯಂತಿಯ ಬಳಿಗೆ ಹೋಗಿ, "ನಾನು ನಿನ್ನ ಬಂಧುವಿನ ಸ್ನೇಹಿತನಾದ ಸುದೇವ ಬ್ರಾಹ್ಮಣನು" ಎಂದು ಹೇಳಲು, ದಮಯಂತಿಗೂ ಆತನ ಗುರುತು ಹತ್ತಿತು. ಆಗ ದಮಯಂತಿಯು ತವರುಮನೆಯವರೆಲ್ಲರ ಯೋಗಕ್ಷೇಮವನ್ನು ವಿಚಾರಿಸಿ, ದುಃಖವು ಒತ್ತರಿಸಲು, ದೊಡ್ಡ ದನಿಯಿಂದ ಅಳತೊಡಗಿದಳು. ಹೀಗೆ ದಮಯಂತಿಯು ಅಳುವದನ್ನು ಕೇಳಿ, ರಾಜಮಾತೆಯು ಅಲ್ಲಿಗೆ ಬಂದು, ಅಳುವ ಕಾರಣವನ್ನು

ಸುದೇವ ಬ್ರಾಹ್ಮಣನಿಗೆ ಕೇಳಲು, ಆತನು ದಮಯಂತಿಯ ಸಾದ್ಯಂತ ವರ್ತಮಾನವನ್ನು ಹೇಳಿದನು.

ಸುದೇವ ಬ್ರಾಹ್ಮಣನು ಹೇಳಿದ ಸಂಗತಿಯಿಂದ ಆ ರಾಜಮಾತೆಗೆ, ತನ್ನಲ್ಲಿರುವ ಸೈರಂಧ್ರಿಯು ತನ್ನ ತಂಗಿಯ ಮಗಳಾದ ದಮಯಂತಿಯೆಂಬದು ಗೊತ್ತಾಗಿ, ಆಕೆಯು ದಮಯಂತಿಯನ್ನು ಕುರಿತು—"ಎಲೈ ಸುಂದರಾಂಗೀ, ನೀನು ನನ್ನ ತಂಗಿಯ ಮಗಳೆಂಬದು, ನಿನ್ನ ಈ ಮಚ್ಚದಿಂದ ನನಗೆ ಗೊತ್ತಾಯಿತು. ನಿನ್ನ ಈ ಮಚ್ಚವು ಇಷ್ಟುದಿನ ಮಾಲಿನ್ಯದಿಂದ ಮಸಕಾಗಿ ನೆಟ್ಟಗೆ ಕಾಣದ್ದರಿಂದ, ನಾನು ಅದನ್ನು ಗುರುತಿಸಿದ್ದಿಲ್ಲ! ತಂಗೀ, ಈ ಮನೆಯು ನಿನ್ನದೆಂದು ತಿಳಿ." ಎಂದು ಹೇಳಲು, ದಮಯಂತಿಯು ಆನಂದದಿಂದ ತನ್ನ ಅಬಚಿಯ ಚರಣಕ್ಕೆರಗಿ—"ಅಬಚೀ, ನಮ್ಮಿಬ್ಬರ ಗುರುತು ಪರಸ್ಪರರಿಗೆ ಹತ್ತದಿದ್ದರೂ, ನಿನ್ನ ಮನೆಯಲ್ಲಿ ನಾನು ಯಾತರ ಕೊರತೆಯೂ ಇಲ್ಲದಂತೆ ಸುಖವಾಗಿ ಇದ್ದೆನು. ನಿನ್ನ ಮನೆಯಲ್ಲಿರುವದರಿಂದ ಮುಂದೆಯೂ ನನಗೆ ಸುಖವಾಗುತ್ತದೆ; ಆದರೆ ನನ್ನ ಮಕ್ಕಳನ್ನು ನೋಡದೆ ಬಹಳ ದಿವಸಗಳಾದದ್ದರಿಂದ, ನನ್ನ ತಂದೆಯ ಮನೆಗೆ ನನ್ನನ್ನು ಕಳಿಸಿಕೊಡು." ಎಂದು ಹೇಳಿದಳು. ಅದಕ್ಕೆ ಆ ರಾಜಮಾತೆಯು ಒಪ್ಪಿಕೊಂಡು ಮಗನನ್ನು ಕೇಳಿ, ದಮಯಂತಿಯನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ, ಸಂರಕ್ಷಣಕ್ಕಾಗಿ ತಕ್ಕಷ್ಟು ಪರಿವಾರವನ್ನು ಸಂಗಡ ಕೊಟ್ಟು, ಆಕೆಯನ್ನು ವಿದರ್ಭದೇಶಕ್ಕೆ ಕಳಿಸಿದಳು. ದಮಯಂತಿಯು ಬೇಗನೆ ತನ್ನ ತವರಮನೆಗೆ ಹೋಗಿ ಬಹುಮಾನಿತಳಾಗಿ, ತನ್ನ ಯಾವತ್ತು ಪರಿವಾರವು ಕ್ಷೇಮದಿಂದಿರುವದನ್ನು ತಿಳಿದು, ದೇವರನ್ನೂ, ಬ್ರಾಹ್ಮಣರನ್ನೂ ಪೂಜಿಸಿದಳು. ಮಗಳನ್ನು ನೋಡಿ ಭೀಮರಾಜನಿಗೆ ಪರಮಾನಂದವಾಯಿತು. ಕೂಡಲೆ, ಆತನು ಸುದೇವಬ್ರಾಹ್ಮಣನಿಗೆ ವಿಪುಲ ದಕ್ಷಿಣೆಯನ್ನೂ, ಸಾವಿರ ಆಕಳುಗಳನ್ನೂ, ಊರುಗಳನ್ನೂ ಕೊಟ್ಟನು. ದಮಯಂತಿಯು ಆ ರಾತ್ರಿ ತಂದೆಯ ಮನೆಯಲ್ಲಿ ವಿಶ್ರಾಂತಿಯನ್ನು ಹೊಂದಿ, ಮರುದಿನ ತನ್ನ ತಾಯಿಗೆ—"ಅವ್ವಾ, ನಾನು ಜೀವದಿಂದರಬೇಕೆಂದು ನಿನ್ನ ಇಚ್ಛೆಯಿದ್ದರೆ, ನರವೀರನಾದ ನಳನನ್ನು ಕರೆಸುವ ಪ್ರಯತ್ನವನ್ನು ಮಾಡು."

ದಮಯಂತಿಯು ಈ ಮಾತುಗಳನ್ನು ಕೇಳಿ ರಾಣಿಗೆ ಬಹಳ ದುಃಖವಾಯಿತು. ಆಕೆಯು ಆ ಸಂಗತಿಯನ್ನು ತನ್ನ ಪತಿಯಾದ ಭೀಮರಾಜನಿಗೆ ತಿಳಿಸಿ, ನಳರಾಜನನ್ನು ಹುಡುಕಿಸುವ ಯತ್ನಮಾಡಬೇಕೆಂದು ಹೇಳಿದಳು. ಆಗ ಭೀಮನು ತನ್ನ ಆಜ್ಞೆಯಂತೆ ನಡೆಯುವ ಬ್ರಾಹ್ಮಣರನ್ನು ಕರೆಸಿ, ಅವರನ್ನು ನಳನ ಶೋಧಕ್ಕಾಗಿ ದೇಶದೇಶಗಳಿಗೆ ಕಳಿಸಿದನು. ಆ ಬ್ರಾಹ್ಮಣರು ಹೊರಡುವಾಗ ದಮಯಂತಿಯ ಕಡೆಗೆ ಹೋಗಲು, ಆಕೆಯು ಅವರನ್ನು ಕುರಿತು—" ಬ್ರಾಹ್ಮಣರುಗಳಿರಾ, ನೀವು ಯಾವತ್ತು ರಾಷ್ಟ್ರಗಳಿಗೆ ಹೋಗಿ, ಜನಸಮೂಹವಿದ್ದಲ್ಲಿ ಹೀಗೆ ಹೇಳಿರಿ— " ಎಲೈ ಧೂರ್ತಾ, ಪ್ರಿಯಕರಾ, ನಿನ್ನಲ್ಲಿ ಅನುರಕ್ತಳಾಗಿರುವ ಸ್ತ್ರೀಯು ಅರಣ್ಯದಲ್ಲ ನಿದ್ರೆಹೋಗಿರುವಾಗ, ಆಕೆಯ ವಸ್ತ್ರವನ್ನು ಹರಕೊಂಡು ಆಕೆಯನ್ನು ಬಿಟ್ಟು ಯಾವಕಡೆಗೆ ಹೊರಟುಹೋಗಿರುತ್ತೀ ? ನೀನು ಆಕೆಯನ್ನು ಪೂರ್ವದಲ್ಲ ನೋಡಿದಹಾಗೆಯೇ ಈಗಾದರೂ ಆಕೆಯು ಅರ್ಧವಸ್ತ್ರವನ್ನೇ ಉಟ್ಟುಕೊಂಡು ದುಃಖದಿಂದ ಕಂದಿ ನಿನ್ನ ಹಾದಿಯನ್ನು ನೋಡುತ್ತಿರುವಳು. ಎಲೈ ರಾಜಾ, ದುಃಖದಿಂದ ಅಳುತ್ತಿರುವ ಆ ಸ್ತ್ರೀಯನ್ನು ಅನುಗ್ರಹಿಸಿ ಆಕೆಯ ಸಂಗಡ ಮಾತಾಡು. "

ಬ್ರಾಹ್ಮಣರೇ, ನೀವು ಹೀಗೆ ಒಂದುಸಾರೆಯಲ್ಲ, ಹಲವುಸಾರೆ ಹೇಳಿರಿ ; ಯಾಕಂದರೆ, ಒಂದೇಸವನೆ ಬಿರುಗಾಳಿಯು ಬೀಸುವದರಿಂದ ಅಗ್ನಿಯು ಪ್ರಜ್ವಲಿಸುವಂತೆ, ಒಮ್ಮೆ ಸುಳಿದುಹೋದ ನಸುಗಾಳಿಯಿಂದ ಅಗ್ನಿಯು ಪ್ರಜ್ವಲಿಸಲಾರದು ; ಆದ್ದರಿಂದ ಮತ್ತೂ ನೀವು ಆತನಿಗೆ ಹೀಗೆ ಹೇಳಿರಿ—" ಪತಿಯು ತನ್ನ ಪತ್ನಿಯ ಪೋಷಣವನ್ನೂ, ರಕ್ಷಣವನ್ನೂ ಮಾಡಲೇಬೇಕು ; ಆದರೆ ನೀನು ಧರ್ಮಜ್ಞನಿದ್ದು, ಇವೆರಡೂ ಕೆಲಸಗಳನ್ನೂ ಯಾಕೆ ಮಾಡದಿರುವೆಯೋ ಏನೊ? ನೀನು ತಿಳಿದವನೂ ಕುಲೀನನೂ, ದಯಾಲುವೂ ಎಂದು ಯಾವಾಗಲೂ ಪ್ರಸಿದ್ಧನಾಗಿರುವೆ ; ಆದರೆ ನನ್ನ ಭಾಗ್ಯವೇ ಕ್ಷೀಣವಾದದ್ದರಿಂದ, ನನ್ನ ವಿಷಯವಾಗಿ ನೀನು ನಿರ್ದಯನಾಗಿರುವೆಯೆಂದು ನನಗೆ ತೋರುತ್ತದೆ; ಆದರೆ ಪುರುಷಶ್ರೇಷ್ಠಾ, ನಿರ್ದಯಮಾಡದಿರುವದು ಮುಖ್ಯ ಧರ್ಮವೆಂದು ನಾನು ನಿನ್ನ ಬಾಯಿಂದಲೇ ಕೇಳಿದ್ದೇನೆ; ಆದ್ದರಿಂದ ನೀನು ನನ್ನಮೇಲೆ ದಯಮಾಡಬೇಕು. "

ದಮಯಂತಿಯು ಈ ಮೇರೆಗೆ ಹೇಳಿ ಮತ್ತೆ ಆ ಬ್ರಾಹ್ಮಣರನ್ನು ಕುರಿತು-"ಹೀಗೆ ನೀವು ಪುನಃ ಪುನಃ ನುಡಿಯುತ್ತಿರುವಾಗ, ಅದನ್ನು ಕೇಳಿ ಯಾರು ನಿಮಗೆ ಉತ್ತರಕೊಡುವರೋ, ಅವರು ಎಲ್ಲಿರುವರು, ಏನು ಮಾಡುವರು ಎಂಬದನ್ನು ಶೋಧಮಾಡಿಕೊಂಡು ನನಗೆ ತಿಳಿಸಿರಿ. ಆ ಉತ್ತರಕೊಡುವವನು ಸಮರ್ಥನಿರಲಿ-ಅಸಮರ್ಥನಿರಲಿ, ಶ್ರೀಮಂತನಿರಲಿ-ಬಡವನಿರಲಿ, ಯಾವಸ್ಥಿತಿಯಲ್ಲಿಯೇ ಇರಲಿ ಅದನ್ನು ಲಕ್ಷಿಸದೆ, ಅವನಿಗೆ ಗೊತ್ತಾಗದಂತೆ ಯುಕ್ತಿಯಿಂದ ಆತನ ಎಲ್ಲ ಸಂಗತಿಯನ್ನು ತಿಳಕೊಂಡು ನನಗೆ ಬಂದು ತಿಳಿಸಿರಿ." ಎಂದು ಹೇಳಿದಳು. ದಮಯಂತಿಯು ಹೇಳಿದಂತೆ ನುಡಿಯುತ್ತ ಆ ಬ್ರಾಹ್ಮಣರು ಎಲ್ಲಕಡೆಗೆ ತಿರುಗಿದರು; ಆದರೆ ಎಲ್ಲಿಯೂ ನಳನ ಶೋಧವಾಗಲಿಲ್ಲ

ಮುಂದೆ ಬಹಳ ದಿವಸಗಳು ಕ್ರಮಿಸಿದಬಳಿಕ, ಪರ್ಣಾದನೆಂಬ ಬ್ರಾಹ್ಮಣನು ದಮಯಂತಿಯಬಳಿಗೆ ಬಂದು—"ದಮಯಂತೀ, ನಾನು ಅಯೋಧ್ಯೆಗೆ ಋತುಪರ್ಣರಾಜನಬಳಿಗೆ ಹೋಗಿ, ಆತನು ಪರಿವಾರದೊಡನೆ ಸಭೆಯಲ್ಲಿ ಕುಳಿತಿರುವಾಗ, ನೀನು ಹೇಳಿದಂತೆ ಹೇಳಿದೆನು; ಆದರೆ ಅದಕ್ಕೆ ಯಾರೂ ಉತ್ತರಕೊಡಲಿಲ್ಲ. ಬಳಿಕ ಋತುಪರ್ಣನ ಅಪ್ಪಣೆಯನ್ನು ಪಡೆದು, ಬಾಹುಕನೆಂಬವನು ನನ್ನನ್ನು ಏಕಾಂತದಲ್ಲಿ ಕರೆದೊಯ್ದನು. ಆತನು ಋತುಪರ್ಣನ ಸೇವಕನಿರಬಹುದು. ಆತನು ಕುರೂಪಿಯಿದ್ದನು. ಆತನ ತೋಳುಗಳು ಕಿರಿದಾಗಿದ್ದವು. ಆತನು ಕುದುರೆಗಳನ್ನು ಉತ್ತಮರೀತಿಯಿಂದ ನಡಿಸುತ್ತಿದ್ದು, ಅಡಿಗೆಯನ್ನು ಒಳ್ಳೇ ರುಚಿಕರವಾಗಿ ಮಾಡುವನು. ಆತನು ನನ್ನ ಮಾತುಗಳನ್ನು ಕೇಳಿ, ಹಲವು ಸಾರೆ ಉಸುರುಗಳೆದು, ಕಣ್ಣೀರುಸುರಿಸುತ್ತ, ದುಃಖಿಸುತ್ತ ನನ್ನನ್ನು ಕುರಿತು—"ಸಾಧ್ವಿಯೂ, ಕುಲೀನಳೂ ಆದ ಯಾವಸ್ತ್ರೀಯು, ಸಂಕಟದಲ್ಲಿದ್ದರೂ ತನ್ನ ಸಂರಕ್ಷಣವನ್ನು ತಾನೇ ಮಾಡಿಕೊಳ್ಳುವಳೋ, ಆಕೆಯು ನಿಜವಾಗಿಯೇ ಸ್ವರ್ಗವನ್ನು ಸಂಪಾದಿಸಿದಳೆಂಬದರಲ್ಲಿ ಸಂಶಯವಿಲ್ಲ. ಶ್ರೇಷ್ಠಪ್ರತಿಯ ಸ್ತ್ರೀಯರು ಪತಿಯವಿಯೋಗವಾದರೂ, ಎಂದೂ ಪತಿಯಮೇಲೆ ಸಿಟ್ಟಾಗದೆ, ತಮ್ಮ ಪ್ರಾಣಗಳಿಗೆ ಸದಾಚಾರದ ಕವಚವನ್ನು ತೊಡಿಸಿ ಅವನ್ನು ರಕ್ಷಿಸುವರು. ಸಂಕಟಮಗ್ನನಾಗಿ ಸುಖದಿಂದ

ಭ್ರಷ್ಟನಾದ ಆ ಮೂರ್ಖನು, ಆಕೆಯನ್ನು ತ್ಯಜಿಸಿದರೂ ಆತನ ಮೇಲೆ ಸಿಟ್ಟಾಗುವದು ಆಕೆಗೆ ಯೋಗ್ಯವಲ್ಲ. ಆಗ ಆತನ ಚರಿತಾರ್ಥವೂ ಸಾಗ ದಂತಾಗಿತ್ತು; ಪಕ್ಷಿಗಳು ಆತನ ವಸ್ತ್ರವನ್ನು ಅಪಹರಿಸಿ ಒಯ್ದಿದ್ದವು. ಆಗ ಆತನು ಹಲವು ಮಾನಸಿಕ ವ್ಯಥೆಗಳಿಂದ ಕಮರಿ ಹೋಗುತ್ತಲಿದ್ದನು! ಆದ್ದರಿಂದ ಸುಂದರೀ, ಆತನಮೇಲೆ ಸಿಟ್ಟಾಗುವದು ಯೋಗ್ಯವಲ್ಲ. ಆ ಪತಿಯು ಆಕೆಯನ್ನು ಸತ್ಕರಿಸಿರಲಿ, ಅಥವಾ ಆಕೆಯ ಅಪಮಾನಮಾಡಿ ರಲಿ; ಆತನು ಸಂಪತ್‌ಶೂನ್ಯನೂ, ರಾಜ್ಯಭ್ರಷ್ಟನೂ, ಕ್ಷುಧಿತನೂ, ದುಃಖಮಗ್ನನೂ ಆಗಿರುವನೆಂಬದನ್ನರಿತು, ಆತನಮೇಲೆ ಸಿಟ್ಟುಮಾಡದಿ ರುವದು ಯೋಗ್ಯವು" ಎಂದು ಹೇಳಿದನು; ಆದ್ದರಿಂದ ದಮಯಂತೀ, ಇನ್ನು ಏನು ಮಾಡಬೇಕೆಂಬದನ್ನು ವಿಚಾರದಿಂದ ನೀನು ಮಾಡು, ಈ ಸುದ್ದಿಯನ್ನು ಅರಸನಿಗೂ ತಿಳಿಸು."

ಪರ್ಣಾದ ಬ್ರಾಹ್ಮಣನ ಈ ಮಾತುಗಳನ್ನು ಕೇಳಿ, ದಮಯಂತಿಯ ಕಣ್ಣುಗಳು ನೀರಿನಿಂದ ತುಂಬಿದವು. ಆಕೆಯು ಏಕಾಂ ತದಲ್ಲಿ ಹೋಗಿ ತನ್ನ ತಾಯಿಯನ್ನು ಕುರಿತು—"ಅವ್ವಾ, ನಾನು ಈಗ ಸುದೇವ ಬ್ರಾಹ್ಮಣನನ್ನು ಏಕಾಂತದಲ್ಲಿ ಕರೆಸಿ, ಹೇಳುವದನ್ನು ಹೇಳಿ ಆಯೋಧ್ಯೆಗೆ ಋತುಪರ್ಣರಾಜನಬಳಿಗೆ ಆತನನ್ನು ಕಳಿಸುವೆನು. ನನ್ನ ಮೇಲೆ ನಿನ್ನ ಪ್ರೇಮವಿದ್ದರೆ, ಈ ಸುದ್ದಿಯು ಅಪ್ಪನಿಗೆ ಗೊತ್ತಾಗದಂತೆ ನೋಡಿಕೋ. ಸುದೇವನು ನನ್ನನ್ನು ಇಲ್ಲಿಗೆ ಕರತಂದಂತೆ, ನಳನನ್ನೂ ಬೇಗನೆ ಆತನು ಕರತರುವನು" ಎಂದು ಹೇಳಲು, ರಾಣಿಯು ಅದಕ್ಕೆ ಒಪ್ಪಿಕೊಂಡಳು. ಬಳಿಕ ದಮಯಂತಿಯು, ಶ್ರಮಪರಿಹಾರವಾಗಿದ್ದ ಪರ್ಣಾದ ಬ್ರಾಹ್ಮಣನಿಗೆ ವಿಪುಲಧನವನ್ನುಕೊಟ್ಟು "ನಳನ ಶೋಧವಾ ದಬಳಿಕ ಮತ್ತೆ ಧನಕೊಡುವೆ"ನೆಂದು ಹೇಳಿ, "ನೀನು ದೊಡ್ಡ ಕೆಲಸಮಾಡಿದೆ, ಅದು ಅನ್ಯರಿಂದಾಗುವದು ಶಕ್ಯವಿದ್ದಿಲ್ಲ," ಎಂದು ಅಭಿ ನಂದಿಸಿ, ಆತನನ್ನು ಮನೆಗೆ ಕಳಿಸಿಕೊಟ್ಟಳು. ಬಳಿಕ ಸುದೇವಬ್ರಾಹ್ಮ ಣನನ್ನು ಕರೆಸಿ, ದಮಯಂತಿಯು ಏಕಾಂತದಲ್ಲಿ ಆತನಿಗೆ—"ಸುದೇವಾ, ನೀನು ಈಗಲೆ ಆಯೋಧ್ಯೆಗೆಹೊರಟು, ತಟ್ಟನೆ ಋತುಪರ್ಣರಾಜನ ಮುಂದೆ ನಿಂತುಕೊಂಡು ಆತನಿಗೆ—"ಭೀಮಕನ್ಯೆಯು ಪುನಃ ಸ್ವಯಂ

ವರ ಮಾಡಿಕೊಳ್ಳತಕ್ಕವಳಿದ್ದು, ಯಾವತ್ತುರಾಜರೂ, ರಾಜಪುತ್ರರೂ ಸ್ವಯಂವರಕ್ಕೆ ಹೋಗುತ್ತಿರುವರು. ಆ ಸ್ವಯಂವರದಕಾಲದ ಅವಧಿಯು ನಾಳೆಗೇ ಮುಗಿಯುವದು; ಆದ್ದರಿಂದ ನಿನಗೆ ಶಕ್ಯವಿದ್ದರೆ, ಎಲೈ, ಶತ್ರು ನಾಶಕಾ, ನೀನು ಬೇಗನೆ ಅತ್ತಕಡೆಗೆ ಹೋಗು. ನಾಳೆ ಬೆಳಗಾದ ಕೂಡಲೆ ದಮಯಂತಿಯು ಎರಡನೆಯ ಗಂಡನನ್ನು ಮದುವೆಯಾಗು ವಳು; ಯಾಕಂದರೆ, ಆ ವೀರನಳನು ಸತ್ತನೋ, ಜೀವದಿಂದಿರುವನೋ ಎಂಬದೇನೂ ತಿಳಿಯುವದಿಲ್ಲ.'' ಎಂದು ಹೇಳು, ಎಂದು ಆ ದಮಯಂ ತಿಯು ಸೂಚಿಸಲು, ಸುದೇವನು ಅಯೋಧ್ಯೆಗೆ ಹೋಗಿ ಋತುಪರ್ಣ ನಿಗೆ ಹಾಗೆ ಹೇಳಿದನು.

---

## ೭ನೇ ಪ್ರಕರಣ—ದಮಯಂತಿಯ ಯೋಚನೆ

ಸುದೇವಬ್ರಾಹ್ಮಣನ ಈ ಮಾತುಗಳನ್ನು ಕೇಳಿ ಋತುಪರ್ಣನು, ಸವಿಮಾತುಗಳಿಂದ ಬಾಹುಕನಿಗೆ—"ಅಶ್ವವಿದ್ಯಾಪ್ರವೀಣನಾದ ಎಲೈ ಬಾಹುಕಾ, ನಿನ್ನ ಒಪ್ಪಿಗೆಯಿದ್ದರೆ, ಒಂದೇದಿವಸದಲ್ಲಿ ದಮಯಂತಿಯ ಸ್ವಯಂವರಕ್ಕಾಗಿ ವಿದರ್ಭದೇಶಕ್ಕೆ ಹೋಗಬೇಕೆಂದು ನಾನು ಇಚ್ಛಿಸು ವೆನು'' ಎಂದು ಹೇಳಿದನು. ಋತುಪರ್ಣನ ಈ ಮಾತುಗಳನ್ನು ಕೇಳಿ ಬಾಹುಕನ ಹೃದಯವು ಸೀಳಿದಂತಾಯಿತು. ಆ ಮಹಾಮತಿಯು ತನ್ನೊಳಗೆ—"ದಮಯಂತಿಯು ಹೀಗೆ ಸ್ವಯಂವರ ಮಾಡಿಕೊಳ್ಳ ಬಹುದೋ, ಅಥವಾ ನನ್ನ ಶೋಧಕ್ಕಾಗಿ ಆಕೆಯು ಈ ಉತ್ಕೃಷ್ಟ ಉಪಾ ಯವನ್ನು ಹುಡುಕಿರಬಹುದೋ? ನಾನು ಮೂರ್ಖತನದಿಂದ ಆಕೆ

ಯನ್ನು ಮೋಸಗೊಳಿಸಿದ್ದಕ್ಕಾಗಿ, ಆಕೆಯು ನಿಜವಾಗಿಯೇ ತಿರುಗಿ ಲಗ್ನ ಮಾಡಿಕೊಳ್ಳುತ್ತಿದ್ದರೆ, ಆಕೆಯ ನೀಚತನವೇ ಸರಿ! ಸ್ತ್ರೀಯರ ಸ್ವಭಾವವು ಚಂಚಲವು, ನನ್ನ ಅಪರಾಧವೂ ಭಯಂಕರವು, ಬಹುಕಾಲದ ವಿಯೋಗ ದಿಂದ ಆಕೆಯು ಮನಸ್ಸಿನೊಳಗಿನ ಪ್ರೇಮವೂ ನಷ್ಟವಾಗಿರಬಹುದು! ಆದರೆ ಹೇಗಿದ್ದರೂ ಆಕೆಯು ಇಂಥ ನೀಚಕೆಲಸಗಳನ್ನು ಎಂದೂ ಮಾಡ ಲಾರಳು. ಮೇಲಾಗಿ ಆಕೆಯ ಹೊಟ್ಟೆಯಲ್ಲಿ ಇಬ್ಬರು ಮಕ್ಕಳಾಗಿರು ವರು. ಅಂದಬಳಿಕ ಸ್ವಯಂವರವಾಗುವ ಸಂಭವವು ತೋರುವದಿಲ್ಲ. ಆದರೆ ಏನಿದ್ದದ್ದು ಅಲ್ಲಿಗೆ ಹೋದಹೊರತು ತಿಳಿಯದು; ಆದ್ದರಿಂದ ನನ್ನ ಕೆಲಸಕ್ಕಾಗಿಯೇ ಋತುಪರ್ಣನ ಮಾತಿಗೆ ಒಪ್ಪಿಕೊಳ್ಳುವೆನು." ಎಂದು ಯೋಚಿಸಿ ಋತುಪರ್ಣನಿಗೆ—"ರಾಜಾ, ನಿನ್ನ ಮಾತಿಗೆ ನನ್ನ ಒಪ್ಪಿಗೆ ಇದೆ. ಒಂದೇದಿವಸದಲ್ಲಿ ನಾನು ಕುಂಡಿನೀಪುರಕ್ಕೆ ಹೋಗುವೆನು."

ಬಳಿಕ ನಳನು ಋತುಪರ್ಣನ ಅಪ್ಪಣೆಯಂತೆ ಅಶ್ವಶಾಲೆಗೆ ಹೋಗಿ, ಸಲಕ್ಷಣವಾದ ನಾಲ್ಕು ಕುದುರೆಗಳನ್ನು ಹುಡುಕಿ ಅವನ್ನು ರಥಕ್ಕೆ ಹೂಡಿ, ತನ್ನ ವಾರ್ಷ್ಣೇಯ ಸಾರಥಿಯನ್ನು ಒಳಗೆ ಕುಳ್ಳಿರಿಸಿಕೊಂಡನು. ಕುದುರೆಗಳು ಸೊರಗಿದಂತೆ ಇರುವದನ್ನು ನೋಡಿ, ಋತುಪರ್ಣನು ಶಂಕಿಸಿ ಬಾಹುಕನಿಗೆ—"ಬಾಹುಕಾ, ಈ ಸೊರಗಿದ ಕುದುರೆಗಳು ಒಂದೇ ದಿವಸದಲ್ಲಿ ಕುಂಡಿನೀಪುರಕ್ಕೆ ಮುಟ್ಟಬಹುದೆ? ಇದೇನೋ ನನಗೆ ನೀನು ಮೋಸಮಾಡುವಂತೆ ತೋರುತ್ತದೆ." ಎಂದು ಅನ್ನಲು, ಬಾಹುಕನು ಕೈಜೋಡಿಸಿ—"ರಾಜಾ, ನಾನಂತು ಉತ್ತಮ ಕುದುರೆಗಳಿಂದು ಆರಿಸಿ ಹೂಡಿದ್ದೇನೆ. ಅವು ನಿನ್ನ ಮನಸ್ಸಿಗೆ ಬಾರದಿದ್ದರೆ, ಬೇರೆ ಕುದುರೆಗಳನ್ನು ತರಿಸು." ಎಂದು ಹೇಳಿದನು. ಅದಕ್ಕೆ ಋತುಪರ್ಣನು—"ನೀನು ಅಶ್ವ ವಿದ್ಯೆ ಬಲ್ಲವನಾದದ್ದರಿಂದ, ನೀನು ಆರಿಸಿ ತಂದಿದ್ದ ಕುದುರೆಗಳೇ ಇರಲಿ; ನನಗೆ ಸಂಶಯ ಬಂದದ್ದರಿಂದ ಕೇಳಿದೆನು." ಎಂದು ಹೇಳಿದನು. ಬಳಿಕ ಬಾಹುಕನು ಕುದುರೆಗಳನ್ನು ಮುಂದಕ್ಕೆ ಬಿಡಲು, ಅವು ಮೊಣಕಾಲೂರಿ ದವು. ಆಗ ಅವನು ಅವನ್ನು ಚಪ್ಪರಿಸಿ ಸಾಗಬಿಡಲು, ಅವು ವಾಯು ವೇಗದಿಂದ ಓಡಹತ್ತಿದವು. ಬಾಹುಕನ ಆಗಿನ ಸಾರಥ್ಯಕರ್ಮದ ನೈಪು ಣ್ಯವನ್ನು ನೋಡಿ, ರಥದೊಳಗೆ ಕುಳಿತಿದ್ದ ನಳನ ವಾರ್ಷ್ಣೇಯ ಸಾರ

ಥಿಯು ತನ್ನ ಮನಸ್ಸಿನಲ್ಲಿ—"ಅಹಹ! ಇದೇನು ಆಶ್ಚರ್ಯವು! ಇವನೇನು ಇಂದ್ರನ ಸಾರಥಿಯಾದಮಾತಲಿಯೋ, ಅಥವಾ ಅಶ್ವವಿದ್ಯೆಯ ತತ್ವವರಿತಿದ್ದ ಶಾಲಿಹೋತ್ರನೋ, ಅಥವಾ ಪ್ರತ್ಯಕ್ಷ ನನ್ನ ಒಡೆಯನಾದ ನಳರಾಜನೋ ಯಾರಿರಬಹುದು! ನನಗಂತು ಈತನು ನಳನೇ ಆಗಿರಬಹುದಾಗಿ ತೋರುತ್ತದೆ; ಈತನ ಆಕೃತಿಯು ನಳನಂತೆ, ಈತನ ವಯಸ್ಸು ನಳನಷ್ಟು ಇರುವವು; ಈತನ ರೂಪಮಾತ್ರ ಬೇರೆಯಿರುವದು. ಜನರಿಗೆ ತನ್ನ ಗೊತ್ತು ಹತ್ತಬಾರದೆಂದು ನಳನು ಹೀಗೆ ರೂಪವನ್ನು ಬದಲಿಸಿರಬಹುದು. ಒಟ್ಟಿಗೆ, ಈತನು ನಳನೇ ಇರುವನೆಂದು ನನಗೆ ತೋರುತ್ತದೆ.

ಋತುಪರ್ಣನ ಆಶ್ರಯದಲ್ಲಿರುತ್ತಿದ್ದ ನಳನ ಸಾರಥಿಯಾದ ವಾರ್ಷ್ಣೇಯನು ಹೀಗೆ ತರ್ಕಿಸುತ್ತಿರಲು, ನಳನ ರಥವು ವಾಯುವೇಗದಿಂದ ಸಾಗಿತ್ತು. ಆಗ ತನ್ನ ಮೈಮೇಲಿನ ವಸ್ತ್ರವು ಕೆಳಗೆ ಬಿದ್ದಂತೆ ಋತುಪರ್ಣನಿಗೆ ಭಾಸವಾದದ್ದರಿಂದ, ಆತನು ರಥವನ್ನು ನಿಲ್ಲಿಸೆಂದು ಬಾಹುಕನಿಗೆ ಹೇಳಿದನು. ಅದಕ್ಕೆ ಬಾಹುಕನು—"ರಾಜಾ, ನಿನ್ನ ವಸ್ತ್ರವು ಒಂದು ಹರದಾರಿಯ ಹಿಂದೆ ಬಿದ್ದಿರುವದರಿಂದ, ಇನ್ನು ಅದನ್ನು ತಿರುಗಿ ತರುವದು ಶಕ್ಯವಿಲ್ಲ" ಎಂದು ಹೇಳಿದನು. ಅದಕ್ಕೆ ಋತುಪರ್ಣನು—

ಋತುಪರ್ಣ—ಬಾಹುಕಾ, ನೀನು ಅಶ್ವವಿದ್ಯೆಯಲ್ಲಿ ಒಳ್ಳೇ ನಿಪುಣನು; ಆದರೆ ನನ್ನಲ್ಲಿರುವ ಗಣಿತ ವಿದ್ಯೆಯನ್ನು ನೋಡು. ಒಬ್ಬೊಬ್ಬರಲ್ಲಿ ಒಂದೊಂದು ವಿದ್ಯೆಯಿರುತ್ತದೆ. ಎಲ್ಲ ವಿದ್ಯೆಗಳನ್ನು ಬಲ್ಲವನು ಯಾವನೂ ಇರುವದಿಲ್ಲ. ಒಬ್ಬನ ಆಯುಷ್ಯದಲ್ಲಿ ಜ್ಞಾನದ ಪರಿಸಮಾಪ್ತಿಯಾಗದ್ದರಿಂದ, ಸರ್ವಜ್ಞತ್ವವು ಯಾವನಿಗೂ ಇರುವದಿಲ್ಲ. ಇಗೋ, ಈ ಕೇರಗಿಡವಿದೆಯಲ್ಲ, ಅದಕ್ಕೆ ಕಾಯಿಯಾಗಿವೆ; ಆ ಗಿಡದ ಹರಿಯಲ್ಲಿ ಐದು ಕೋಟಿ ಎಲೆಗಳಿರುವವು. ಆ ಟೊಂಗೆಯಲ್ಲಿ ಎರಡು ಸಾವಿರದ ತೊಂಬತ್ತೈದು ಎಲೆಗಳಿರುವವು.

ಬಾಹುಕ—ರಾಜಾ, ನಾನು ಎಣಿಸಲಿಕ್ಕೆ ಬಾರದವನೆಂದು ತಿಳಿದಿರುವೆಯಾ? ನಾನು ಆ ಟೊಂಗೆಯನ್ನು ಎಣಿಸಿ ನೋಡುವೆನು, ಎರಡುಗಳಿಗೆ ನಿಲ್ಲು.

ಋತುಪರ್ಣ—ನಿಂತರೆ ಕುಂಡಿನೀಪುರಕ್ಕೆ ಹೋಗಲಿಕ್ಕೆ ತಡವಾಗುತ್ತದಲ್ಲ?

ಬಾಹುಕ—ನಾನು ಎಣಿಸಿದ ಬಳಿಕ ನಿನ್ನನ್ನು ಹೊತ್ತಿಗೆ ಸರಿಯಾಗಿ ಕರೆದೊಯ್ಯುವೆನು. ನಿನಗೆ ನಂಬಿಗೆಯಿಲ್ಲದಿದ್ದರೆ, ದಾರಿಯು ನೆಟ್ಟಗದೆ; ನಿನ್ನ ವಾರ್ಷ್ಣೇಯ ಸಾರಥಿಯಿದ್ದಾನೆ; ಆತನನ್ನು ಕರಕೊಂಡು ಕುಂಡಿನೀಪುರಕ್ಕೆ ಹೋಗು.

ಋತುಪರ್ಣ—ನಿನ್ನಂಥ ಸಾರಥಿಯನ್ನು ನಾನು ಜಗತ್ತಿನಲ್ಲಿ ನೋಡಿರುವದಿಲ್ಲ. ಎಲೆಗಳನ್ನು ಎಣಿಸಿನೋಡಿದ ಬಳಿಕ, ನೀನೇ ಕುಂಡಿನೀಪುರಕ್ಕೆ ನನ್ನನ್ನು ಕರಕೊಂಡು ಹೋಗು.

ಬಳಿಕ ನಳನು, ಟೊಂಗೆಯ ಎಲೆಗಳನ್ನು ಎಣಿಸಿನೋಡಿ, ಆಶ್ಚರ್ಯಪಟ್ಟನು. ಆಗ ಋತುಪರ್ಣನು—"ನಾನು ಗಣಿತದಲ್ಲಿಯೂ, ಅಕ್ಷವಿದ್ಯೆಯಲ್ಲಿಯೂ ಪ್ರವೀಣನಿರುವೆನು" ಎಂದು ಬಾಹುಕನಿಗೆ ಹೇಳಿದನು. ಅದಕ್ಕೆ ಬಾಹುಕನು—"ರಾಜಾ, ನೀನು ನನಗೆ ಅಕ್ಷವಿದ್ಯೆಯನ್ನು ಕಲಿಸು; ನಾನು ನಿನಗೆ ಅಶ್ವವಿದ್ಯೆಯನ್ನು ಕಲಿಸುವೆನು" ಎಂದು ಹೇಳಿದನು. ಋತುಪರ್ಣನಿಗೆ ಕುಂಡಿನೀಪುರಕ್ಕೆ ಹೋಗುವ ಅವಶ್ಯವಿದ್ದದ್ದರಿಂದ, ಆತನು ಬಾಹುಕನಿಗೆ ಅಕ್ಷವಿದ್ಯೆಯನ್ನು ಉಪದೇಶಿಸಿ, ಆತನಿಂದ ಅಶ್ವವಿದ್ಯೆಯನ್ನು ಗ್ರಹಿಸಿದನು. ಹೀಗೆ ನಳನು ಅಕ್ಷವಿದ್ಯಾಪ್ರವೀಣನಾದ ಕೂಡಲೆ ಕಲಿಯು ಆತನ ದೇಹದಿಂದ ಹೊರಬಿದ್ದು, ನಳನಿಗೆ ಪ್ರತ್ಯಕ್ಷನಾಗಿ ಆತನ ಮುಂದೆ ನಿಂತುಕೊಂಡನು. ಕಲಿಪ್ರವೇಶದಿಂದ ವಿಚಾರಭ್ರಷ್ಟನಾಗಿದ್ದ ನಳನು, ಈಗ ವಿಚಾರಿಯೂ, ತೇಜೋವಂತನೂ ಆಗಿ, ಎದುರಿಗೆ ನಿಂತಿರುವ ಕಲಿಯನ್ನು ನೋಡಿ, ಸಿಟ್ಟಿನಿಂದ ಆತನಿಗೆ ಶಾಪಕೊಡಬೇಕೆಂದು ಮಾಡಿದನು. ಆಗ ಕಲಿಯು ಕೈಜೋಡಿಸಿ—"ರಾಜಾ, ನಿನ್ನ ಸಿಟ್ಟನ್ನು ತಾಳಿಕೋ. ನಿನ್ನ ಉತ್ಕೃಷ್ಟ ಪ್ರಕಾರದ ಕೀರ್ತಿಯನ್ನು ಹಬ್ಬಿಸುವೆನು. ಕರ್ಕೋಟಕ ಸರ್ಪದ ವಿಷದಿಂದಲೂ, ನಿನ್ನ ಹೆಂಡತಿಯಾದ ದಮಯಂತಿಯ ಶಾಪದಿಂದಲೂ ನಾನು ಬಹು ಕಷ್ಟದಿಂದ ನಿನ್ನ ಶರೀರದಲ್ಲಿ ವಾಸಿಸಿದ್ದೆನು. ರಾಜಾ, ಈಗ ನೀನು ನನ್ನನ್ನು ಕ್ಷಮಿಸಿಬಿಟ್ಟರೆ, ನಿನ್ನ ಸ್ಮರಣಮಾಡುವವರಿಗೆ ನನ್ನ ಬಾಧೆಯಾಗದಂತೆ ಅನು

ಗ್ರಹಿಸುವೆನು" ಎಂದು ಹೇಳಿದನು. ಆಗ ನಳನು ಶಾಂತನಾಗಲು, ಕಲಿಯು ಆ ಕೇರ ಗಿಡವನ್ನು ಪ್ರವೇಶಿಸಿದನು. ಇತ್ತ ಬಾಹುಕನು ಋತುಪರ್ಣನೊಡನೆ ಕುಂಡಿನೀಪುರಕ್ಕೆ ಹೋದನು. ನಳನು ಹೋದದ್ದನ್ನು ನೋಡಿ, ಕಲಿಯೂ ಆ ಕೇರಗಿಡದಿಂದ ಹೊರಟು ತನ್ನ ಸ್ಥಳಕ್ಕೆ ಹೋದನು. ಹೀಗೆ ಕಲಿಯು ವಾಸಿಸಿದ್ದರಿಂದ ಕೇರಗಿಡವು ನಿಷೇಧ ವೃಕ್ಷವಾಯಿತು.

ಮುಂದೆ ಹೊತ್ತು ಮುಣುಗಲು, ಅಮೋಘ ಪರಾಕ್ರಮಿಯಾದ ಋತುಪರ್ಣನು ಅಯೋಧ್ಯೆಯಿಂದ ಬಂದ ಸುದ್ದಿಯು ಭೀಮರಾಜನಿಗೆ ಹತ್ತಿತು. ಭೀಮರಾಜನ ಅನುಮತಿಯಿಂದ ಋತುಪರ್ಣನು ಕುಂಡಿನೀ ಪಟ್ಟಣದಲ್ಲಿ ಬರುತ್ತಿರುವಾಗ, ಆತನ ರಥದ ಗಂಭೀರಧ್ವನಿಯು ಗುರುತು ಕುಂಡಿನೀಪಟ್ಟಣದಲ್ಲಿ ಬರುತ್ತಿದ್ದ ನಳರಾಜನ ಕುದುರೆಗಳಿಗೂ, ಸ್ವತಃ ದಮಯಂತಿಗೂ ಹತ್ತಿತು. ಆಗ ದಮಯಂತಿಯು ಆಹ್ಲಾದಪಟ್ಟಳು; ಕುದುರೆಗಳು ಉತ್ಸಾಹಗೊಂಡವು. ಈಗ ನಳನೇ ಬಂದಿರಬೇಕೆಂದು ದಮಯಂತಿಯು ಭಾವಿಸಿದಳು. ಈಗೂ ಆತನು ಬಂದಿರದಿದ್ದರೆ, ಹಾಗು ಇಂದು ನಾನು ಆತನ ಬಾಹುಪಾಶದಿಂದ ಬಿಗಿಯಲ್ಪಡದಿದ್ದರೆ, ನಿಶ್ಚಯವಾಗಿ ತನ್ನ ನಾಶವಾಗುವದೆಂದು, ಆಕೆಯು ತಿಳಿದಳು. ಮೇಘಧ್ವನಿಯಂತೆ ಗಂಭೀರ ಧ್ವನಿಯುಳ್ಳ ನಳರಾಜನು ಇಂದು ನನ್ನ ಸಮೀಪಕ್ಕೆ ಬಾರದಿದ್ದರೆ, ನಿಶ್ಚಯವಾಗಿ ಅಗ್ನಿಪ್ರವೇಶಮಾಡುವೆನೆಂದು ಆಕೆಯು ನಿರ್ಧರಿಸಿದಳು. ಅಷ್ಟರಲ್ಲಿ ಋತುಪರ್ಣರಾಜನ ರಥವು ಬಂದಿತು. ಅದರಲ್ಲಿ ನಳನು ಕಾಣದಿರಲು, ದಮಯಂತಿಯು ದುಃಖಿತಳಾದಳು. ರಥದಲ್ಲಿ ನಳನ ಸಾರಥಿಯಾದ ವಾರ್ಷ್ಣೇಯನನ್ನು ನೋಡಿ, ಈತನೇ ನಳನ ಅಶ್ವವಿದ್ಯೆಕಲಿತು, ರಥವನ್ನು ನಡಿಸಿದ್ದರಿಂದ, ರಥದ ಧ್ವನಿಯು ನಳನ ರಥದ ಧ್ವನಿಯಂತೆ ಉಂಟಾಗಿರಬಹುದೆಂದು ಆಕೆಯು ತರ್ಕಿಸಿ, ಅಸಮಾಧಾನಪಟ್ಟಳು. ಭೀಮರಾಜನು ಋತುಪರ್ಣನ ಸತ್ಕಾರವನ್ನು ಉತ್ತಮರೀತಿಯಿಂದ ಮಾಡಿದನು. ಋತುಪರ್ಣನು ಬಂದ ಕಾರಣವು ಗೊತ್ತಾಗದ್ದರಿಂದ, ಭೀಮನು ಆತನನ್ನು ಕುರಿತು—"ಮಹಾರಾಜಾ, ಋತುಪರ್ಣ, ನಿನಗೆ ಸ್ವಾಗತವಿರಲಿ. ಈಗ ನೀನು ಬಂದ ಕೆಲಸವೇನು?"

ಎಂದು ಕೇಳಿದನು. ಪಟ್ಟಣದಲ್ಲಿ ಸ್ವಯಂವರದ ಲಕ್ಷಣವೇನೂ ಕಾಣದ್ದ ರಿಂದಲೂ, ಯಾವರಾಜರೂ ಬಂದಿರದ್ದರಿಂದಲೂ, ಬ್ರಾಹ್ಮಣ ಭೋಜನಾದಿ ಸಮಾರಂಭಗಳು ನಡೆಯದಿದ್ದದ್ದರಿಂದಲೂ ಇಲ್ಲಿಸ್ವಯಂವರದ ಸುದ್ದಿ ಯಿಲ್ಲವೆಂದು ತಿಳಿದು, ಚತುರನಾದ ಋತುಪರ್ಣನು ಭೀಮರಾಜ ನಿಗೆ—"ಮಹಾರಾಜಾ, ಸಹಜವಾಗಿ ನಿನ್ನನ್ನು ಕಂಡು ನಮಸ್ಕರಿಸಿ ಹೋಗ ಬೇಕೆಂದು ಬಂದೆನು" ಎಂದು ಹೇಳಿದನು; ಆದರೆ ಭೀಮನಿಗೆ ಮಾತ್ರ ಅದರಿಂದ ಸಮಾಧಾನವಾಗಲಿಲ್ಲ. ಏನಿದ್ದಷ್ಟು ಹಿಂದುಗಡೆ ಗೊತ್ತಾಗು ವದೆಂದು ತಿಳಿದು, ಆತನು ಋತುಪರ್ಣನನ್ನು ಆದರದಿಂದ ಉಪಚರಿಸಿ, ಗೊತ್ತುಮಾಡಿದ ಮನೆಗೆ ಆತನನ್ನು ಕಳಿಸಿದನು. ಬಾಹುಕನು ರಥದ ಕುದುರೆಗಳನ್ನು ಕಟ್ಟಿ, ಶಾಸ್ತ್ರದಂತೆ ಅವುಗಳ ಉಪಚಾರಮಾಡಿ, ತನ್ನ ರಥದಲ್ಲಿ ಬಂದು ಕುಳಿತುಕೊಂಡನು. "ರೂಪವು ಬದಲಾಗಿ ಹೋಗಿದ್ದ ಈತನೇ ನಳನಿರಬಹುದೆ?" ಎಂಬ ಸಂಶಯವು ದಮಯಂತಿಗೆ ಉತ್ಪನ್ನ ವಾಯಿತು.

ದಮಯಂತಿಯು ನಳನ ಶೋಧಮಾಡುವ ಆತುರತೆಯಿಂದ ತನ್ನ ದೂತಿಯಾದ ಕೇಶಿನಿಯನ್ನು ಕರೆದು—"ಕೇಶಿನೀ, ಹೋಗು. ರಥದಲ್ಲಿ ಕುಳಿತಿರುವ ಮನುಷ್ಯನು ಯಾರೆಂಬದನ್ನು ಶೋಧಮಾಡಿ ಬಾ. ಆತ ನನ್ನು ನೋಡಿ ನನಗೆ ಸಮಾಧಾನವಾಗುವದರಿಂದ, ಆತನೇ ನಳನಿರಬ ಹುದೆಂಬ ಸಂಶಯವು ನನಗೆ ಉಂಟಾಗುತ್ತದೆ." ಎಂದು ಹೇಳಲು, ಕೇಶಿ ನಿಯು ಬಾಹುಕನ ಬಳಿಗೆ ಹೋಗಿ ಆತನನ್ನು ಕುರಿತು—

ಕೇಶಿನಿ—ಎಲೈ ಮನುಷ್ಯಶ್ರೇಷ್ಠಾ, ನಿನಗೆ ಸ್ವಾಗತವು. ನೀನು ಕ್ಷೇಮದಿಂದಿರುವೆಯಾ? "ನೀನು ಎಲ್ಲಿಂದ ಬಂದೆ? ಯಾವಾಗ ಬಂದೆ?" ಎಂದು ದಮಯಂತಿಯು ಕೇಳಿದ್ದಾಳೆ.

ಬಾಹುಕ—ಇಂದು ದಮಯಂತಿಯ ಸ್ವಯಂವರವೆಂದು ಒಬ್ಬ ಬ್ರಾಹ್ಮಣನು ಋತುಪರ್ಣನಿಗೆ ಹೇಳಿದ್ದರಿಂದ, ಋತುಪರ್ಣನು ಒಂದೇ ದಿವಸದಲ್ಲಿ ನೂರು ಹರದಾರಿ ನಡೆಯುವ ವೇಗದ ಕುದುರೆಗಳನ್ನು ರಥಕ್ಕೆ ಹೂಡಿಕೊಂಡು ಬಂದನು. ನಾನು ಆತನ ಸಾರಥಿಯು.

ಕೇಶಿನಿ— ನಿಮ್ಮ ಸಂಗಡ ಬಂದಿರುವ ಮೂರನೆಯ ಮನುಷ್ಯನು ಯಾರು?

ಬಾಹುಕ— ಎಲೈ ಭದ್ರೇ, ಆತನು ಪುಣ್ಯಶ್ಲೋಕನಾದ ನಳರಾಜನ ಸಾರಥಿಯು. ಆತನು ವಾರ್ಷ್ಣೇಯನೆಂಬ ಹೆಸರಿನಿಂದ ಪ್ರಸಿದ್ಧನಾಗಿರುವನು. ನಳನು ಅರಣ್ಯ ಸೇರಿದ ಬಳಿಕ ವಾರ್ಷ್ಣೇಯನು ಋತುಪರ್ಣನ ಆಶ್ರಯ ಮಾಡಿರುವನು. ನಾನೂ ಋತುಪರ್ಣನಲ್ಲಿ ಸಾರಥಿಯಾಗಿರುವೆನಲ್ಲದೆ, ಆತನಲ್ಲಿ ಅಡಿಗೆಯ ಕೆಲಸವನ್ನೂ ಮಾಡುವೆನು.

ಕೇಶಿನಿ—ಬಾಹುಕಾ, ನಳನು ಎಲ್ಲಿ ಹೋಗಿರುವನೆಂಬದು ವಾರ್ಷ್ಣೇಯನಿಗೆ ಗೊತ್ತಿರುವದೆಯೆ?

ಬಾಹುಕ—ಇಲ್ಲ, ಅದು ಆತನಿಗೆ ಗೊತ್ತಿಲ್ಲ. ನಳರಾಜನು ತನ್ನ ರೂಪವನ್ನು ಬದಲುಮಾಡಿಕೊಂಡು ಜಗತ್ತಿನಲ್ಲಿ ಸಂಚರಿಸುತ್ತಿರುವದರಿಂದ, ಆತನ ಗೊತ್ತು ಯಾರಿಗೂ ಹತ್ತುವಹಾಗಿಲ್ಲ. ನಳನ ಗೊತ್ತು ನಳನಿಗೊಂದು ಇರುವದು; ಆತನ ಆತ್ಮ ಸ್ವರೂಪಳಾದ ಆತನ ಹೆಂಡತಿ ದಮಯಂತಿಗೊಂದು ಇರುವದು; ಯಾಕಂದರೆ, ನಳನು ತನ್ನ ಗುರುತನ್ನು ಯಾರಿಗೂ ಹೇಳುವದಿಲ್ಲ.

ಈಮೇರೆಗೆ ಸಂಭಾಷಣವಾದ ಬಳಿಕ, ಹಿಂದಕ್ಕೆ ಪರ್ಣಾದ ಬ್ರಾಹ್ಮಣನು ಬಾಹುಕನ ಮುಂದೆ ಹೇಳಿದ ಮಾತುಗಳನ್ನು ಈಗ ಕೇಶಿನಿಯೂ ಬಾಹುಕನ ಮುಂದೆ ಹೇಳಲು, ಅದಕ್ಕೆ ಹಿಂದಿನಂತೆಯೇ ಉತ್ತರ ಕೊಡುವಾಗ ದುಃಖವು ನಿಲ್ಲದೆ ಬಾಹುಕನು ಅಳತೊಡಗಿದನು. ಆಗ ಕೇಶಿನಿಯು ದಮಯಂತಿಯ ಬಳಿಗೆ ಹೋಗಿ, ನಡೆದ ಸಂಗತಿಯನ್ನು ಒಂದು ಅಕ್ಷರ ಬಿಡದೆ ಹೇಳಿದಳು.

ಕೇಶಿನಿಯ ಮಾತುಗಳನ್ನು ಕೇಳಿ ದಮಯಂತಿಯು ಅತ್ಯಂತ ಶೋಕಾಕುಲಳಾಗಿ ಪುನಃ ಕೇಶಿನಿಯನ್ನು ಕರೆದು—"ಕೇಶಿನೀ, ನೀನು ಮತ್ತೆ ಬಾಹುಕನ ಬಳಿಗೆ ಹೋಗಿ, ಆತನ ಸಂಗಡ ಏನೂ ಮಾತಾಡದೆ, ಆತನ ಕೃತಿಗಳನ್ನಷ್ಟು ನೋಡಿ ಬಂದು ನನಗೆ ಹೇಳು" ಎಂದು ಹೇಳಿದಳು. ಆದರಂತೆ ಕೇಶಿನಿಯು ಬಾಹುಕನ ಬಳಿಗೆಹೋಗಿ, ಲಕ್ಷಪೂರ್ವಕವಾಗಿ ಆತನ ಕೃತಿಗಳನ್ನೆಲ್ಲ ನೋಡಿ ದಮಯಂತಿಯ ಬಳಿಗೆ ಬಂದು— "ದಮಯಂತೀ, ಆ ಬಾಹುಕನ ಆಶ್ಚರ್ಯಕಾರಕ ಕೃತಿಗಳನ್ನು ನಾನು ನೋಡಿದೆನು. ಆತನ ಕೆಲಸಗಳು ಬಹಳ ಸ್ವಚ್ಛ; ಆತನು ಹೋಗುವಾಗ

ಬಾಗಿಲು ಎಷ್ಟು ಕಿರಿದು ಇದ್ದರೂ ಆತನು ಬಗ್ಗುವದಿಲ್ಲ, ಬಾಗಿಲೇ ದೊಡ್ಡದಾಗುತ್ತದೆ. ಆತನು ಹೋಗುವಾಗ ಹಾದಿಯಲ್ಲಿ ಎಷ್ಟು ದಟ್ಟಣೆಯಿದ್ದರೂ, ಆತನು ಹೋಗಹತ್ತಿದಕೂಡಲೆ ರಾಜಮಾರ್ಗವಾಗುತ್ತದೆ. ಆ ಮಹಾತ್ಮನು ಇಚ್ಛಿಸಿದ ಕೂಡಲೆ ಬೆಂಕಿ-ನೀರುಗಳು ಉತ್ಪನ್ನವಾಗುವದನ್ನು ನಾನು ನೋಡಿದೆನು! ಇನ್ನೂ ಆಶ್ಚರ್ಯಗಳನ್ನು ನೋಡಿದೆನು; ಬೆಂಕಿಯನ್ನು ಹಿಡಿದರೂ ಆತನ ಕೈ ಸುಡುವದಿಲ್ಲ; ಆತನು ತನ್ನ ಕೈಯಲ್ಲಿ ಹೂಗಳನ್ನು ತಕ್ಕೊಂಡು ತಿಕ್ಕಿದರೂ, ಕೂಡಲೆ ಅವು ಅರಳಿ ಸುಗಂಧವನ್ನು ಬೀರುವವು" ಎಂದು ನುಡಿಯಲು, ದಮಯಂತಿಯು ಆತನು ನಳನೇ ಇರಬಹುದೆಂದು ತರ್ಕಿಸಿ, ಮತ್ತೆ ಕೇಶಿನಿಯನ್ನು ಕರೆದು—"ಕೇಶಿನೀ, ಇದೊಂದು ಸಾರೆ ನೀನು ಬಾಹುಕನ ಬಳಿಗೆ ಹೋಗಿ, ಆತನು ಅಡಿಗೆ ಮಾಡಿದ ಮಾಂಸವನ್ನು ತಕ್ಕೊಂಡು ಬಾ" ಎಂದು ಹೇಳಲು, ಕೇಶಿನಿಯು ಬಾಹುಕನ ಬಳಿಗೆ ಹೋಗಿ ಆತನಿಗೆ ಗೊತ್ತಾಗದಂತೆ ಸುಡುಸುಡುವ ಮಾಂಸವನ್ನು ತಕ್ಕೊಂಡು ದಮಯಂತಿಯ ಬಳಿಗೆ ಬಂದಳು. ಬಹು ದಿವಸ ನಳಪಾಕವನ್ನುಂಡ ದಮಯಂತಿಯು, ಈ ಪಾಕ ಮಾಡಿದವನು ನಳನೇ ಎಂದು ನಿಶ್ಚಯಿಸಿ, ತನ್ನ ಇಬ್ಬರು ಮಕ್ಕಳನ್ನು ಕೇಶಿನಿಯ ಸಂಗಡ ಬಾಹುಕನ ಬಳಿಗೆ ಕಳಿಸಿದಳು.

ಬಾಹುಕನು ಇಂದ್ರಸೇನೆಯನ್ನೂ, ಆಕೆಯ ತಮ್ಮನಾದ ಇಂದ್ರಸೇನನನ್ನೂ ಗುರುತಿಸಿದನು. ಆತನು ಅವರನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ಅವರನ್ನು ನೋಡುವಾಗ ಆತನ ದುಃಖವು ಹೊಟ್ಟೆಯಲ್ಲಿ ಹಿಡಿಸದಾಗಲು, ಆತನು ದೊಡ್ಡ ಧ್ವನಿಯಿಂದ ಅಳಹತ್ತಿದನು. ತಾನು ಅಳುವದು ಕೇಶಿನಿಗೆ ಗೊತ್ತಾಯಿತೆಂದು ತಿಳಿದು, ತನ್ನ ಮಕ್ಕಳನ್ನು ದೂರ ಮಾಡಿ ಕೇಶಿನಿಗೆ— "ಎಲೈ ಭದ್ರೇ, ಈ ಇಬ್ಬರು ಹುಡುಗರು ನನ್ನ ಇಬ್ಬರು ಮಕ್ಕಳಂತೆಯೇ ಇದ್ದದ್ದರಿಂದ, ನನ್ನ ದುಃಖವು ಒತ್ತರಿಸಿ ಒಮ್ಮಿಂದೊಮ್ಮೆ ನನ್ನ ಕಣ್ಣುಗಳಲ್ಲಿ ನೀರು ಬಂದವು. ಇರಲಿ, ಹೀಗೆ ನೀನು ಮೇಲಿಮೇಲೆ ನನ್ನ ಬಳಿಗೆ ಬರಹತ್ತಿದರೆ, ನಿನ್ನ ವಿಷಯವಾಗಿ ಜನರು ಇಲ್ಲದ ಸಂಶಯ ಪಡಬಹುದು; ಯಾಕಂದರೆ, ನಾವು ಹೊಸದಾಗಿ ಇಲ್ಲಿಗೆ ಬಂದವರಾದದ್ದರಿಂದ, ನಮ್ಮ ಗುಣಗಳು ಇಲ್ಲಿಯವರಿಗೇನು ಗೊತ್ತಾಗ್ಯ

ವವು? ಅವ್ವಾ, ಇನ್ನು ನಿನಗೆ ನಮಸ್ಕಾರವು. ನೀನು ಇಲ್ಲಿಂದ ಹೊರಟು ಹೋಗು. ''

---

## ೮ನೇ ಪ್ರಕರಣ—ನಳದಮಯಂತೀಸಂಯೋಗ

ಕೇಶಿನಿಯು ನಳರಾಜನ ಚಿತ್ತವೃತ್ತಿಯಲ್ಲಿ ಆದ ಹೆಚ್ಚುಕಡಿಮೆಗಳನ್ನೆಲ್ಲ ದಮಯಂತಿಗೆ ಹೇಳಿದಳು. ದಮಯಂತಿಯು ನಳನ ದರ್ಶನವನ್ನು ಸ್ವತಃ ಮಾಡಿಕೊಳ್ಳುವದಕ್ಕಾಗಿ ತನ್ನ ತಾಯಿಯನ್ನು ಕುರಿತು—“ಅವ್ವಾ, ಕೇಶಿನಿಯದ್ವಾರದಿಂದ ಬಾಹುಕನನ್ನು ಬಹಳವಾಗಿ ನಾನು ಪರೀಕ್ಷಿಸಿದೆನು; ಎಲ್ಲ ಲಕ್ಷಣಗಳಿಂದ ಆತನೇ ನಳನೆಂಬದು ನನಗೆ ನಿಶ್ಚಯವಾಗಿದೆ; ಆದರೆ ಆತನ ರೂಪವೊಂದು ಭಿನ್ನವಾಗಿರುವದರಿಂದ, ಸ್ವಲ್ಪ ಸಂಶಯಕ್ಕೆ ಅಸ್ಪದವಾಗಿದೆ; ಆದ್ದರಿಂದ ನಾನೇ ಬಾಹುಕನನ್ನು ಪರೀಕ್ಷಿಸಬೇಕೆಂದಿದ್ದೇನೆ. ಅದಕ್ಕಾಗಿ ಆತನ ಬಳಿಗೆ ಹೋಗಲಿಕ್ಕೆ ನನಗಾದರೂ ಅಪ್ಪಣೆ ಕೊಡು; ಇಲ್ಲವೆ ನೀನಾದರೂ ಆತನನ್ನು ನನ್ನ ಬಳಿಗೆಕರೆಸಿಕೊಡು. ನನ್ನ ಈ ವಿಚಾರವು ತಂದೆಗೆ ತಿಳಿಯಲಿ ತಿಳಿಯದಿರಲಿ, ಎರಡರಲ್ಲಿ ಒಂದು ಕೆಲಸ ಮಾಡು” ಎಂದು ಹೇಳಿದಳು. ರಾಣಿಯು ಈ ಸಂಗತಿಯನ್ನು ತನ್ನ ಪತಿಗೆ ತಿಳಿಸಲು, ಆತನೂ ದಮಯಂತಿಯ ಮಾತಿಗೆ ಒಪ್ಪಿಕೊಂಡನು. ಹೀಗೆ ತಾಯಿತಂದೆಗಳ ಅನುಮತಿಯನ್ನು ಪಡೆದ ದಮಯಂತಿಯು, ಬಾಹುಕನನ್ನು ತನ್ನ ಬಳಿಗೆ ಕರೆಸಿಕೊಂಡಳು. ಪರಸ್ಪರರ ದರ್ಶನದಿಂದ ಇಬ್ಬರೂ ಶೋಕಮಗ್ನರಾದರು. ಆಗ ಕಾಷಾಯ ವಸ್ತ್ರವನ್ನು ಧರಿಸಿದವಳೂ, ನಳನ ವಿಯೋಗವಾದಂದಿನಿಂದ ಹೆಳಲು ಹಾಕಿಕೊಳ್ಳದಿರಲು, ಜಡೆಗಟ್ಟಿದ ಕೂದಲುಳ್ಳವಳೂ, ಎರೆದುಕೊಳ್ಳದ್ದರಿಂದ ಮಲಿನವಾದ ದೇಹವುಳ್ಳವಳೂ ಆದ ದಮಯಂತಿಯು ಬಾಹುಕನನ್ನು ಕುರಿತು—

ದಮಯಂತಿ— ಬಾಹುಕಾ, ಹೆಂಡತಿಯು ನಿದ್ದೆಹತ್ತಿ ಮಲಗಿದಾಗ ಆಕೆಯ ಅರ್ಧ ವಸ್ತ್ರವನ್ನು ಹರಿದುಕೊಂಡು ಘೋರಾರಣ್ಯದಲ್ಲಿ ಆಕೆಯನ್ನು ಬಿಟ್ಟು ಹೋದ ಧರ್ಮಜ್ಞ ಪುರುಷನನ್ನು ನೀನು ಎಲ್ಲಿಯಾದರೂ ನೋಡಿರುವೆಯಾ? ಅಂಥವನು ಪುಣ್ಯ ಶ್ಲೋಕ ನಳನಲ್ಲದೆ ಮತ್ತೊಬ್ಬನು ಯಾವನಿರಬಹುದು? ನಾನು ಮಾಡಿದ ಅಂಥ ಅಪರಾಧವಾದರೂ ಏನು? ನಾನಂತು ಪ್ರತ್ಯಕ್ಷ ದೇವತೆಗಳನ್ನು ಬಿಟ್ಟು ನಳನನ್ನು ಆ ದೇವತೆಗಳ ಸಮಕ್ಷ ಲಗ್ನವಾದೆನು. ಹೀಗಿದ್ದು, ಅನುಕೂಲೆಯೂ, ಪುತ್ರವತಿಯೂ ಆಗಿರುವ ನನ್ನನ್ನು ನಳನು ತ್ಯಜಿಸಬಹುದೆ? ಆತನು ಅಗ್ನಿಸನ್ನಿಧಿಯಲ್ಲಿ ನನ್ನ ಪಾಣಿಗ್ರಹಣ ಮಾಡಿ "ಬದುಕಿರುವವರೆಗೆ ನಿನ್ನ ಸಹವಾಸದಲ್ಲಿರುವೆನು." ಎಂದು ಮಾಡಿರುವ ಆ ಪುಣ್ಯಶ್ಲೋಕನ ಪ್ರತಿಜ್ಞೆಯು ಎತ್ತಕಡೆಗೆ ಹೋಯಿತು?

ಹೀಗೆ ನುಡಿಯುವಾಗ ದಮಯಂತಿಯ ಕಣ್ಣುಗಳೊಳಗಿಂದ ಒಂದೇ ಸವನೆ ನೀರುಗಳು ಸುರಿಯಹತ್ತಿದವು. ಅಂಥ ದಮಯಂತಿಯನ್ನು ನೋಡಿ ನಳರಾಜನು —

ನಳ—ಎಲೈ ಭೀರು, ನನ್ನ ರಾಜ್ಯವನ್ನು ನಾಶಮಾಡಿದವನೂ, ನಿನ್ನನ್ನು ಬಿಟ್ಟವನೂ ನಾನಲ್ಲ, ಕಲಿಯು; ಅವನೇ ನನ್ನ ಶರೀರದಲ್ಲಿ ಪ್ರವೇಶಿಸಿ ಇಷ್ಟೆಲ್ಲ ಅನರ್ಥವನ್ನು ಮಾಡಿಸಿದನು! ನೀನು ವನದಲ್ಲಿ ಕಷ್ಟಪಡುತ್ತಿರುವಾಗ, ಕಲಿಗೆ ನೀನುಕೊಟ್ಟ ಶಾಪದಿಂದ ಆತನು ನನ್ನ ದೇಹದಲ್ಲಿ ಕಷ್ಟಪಡುತ್ತ ವಾಸಿಸುತ್ತಿದ್ದನು. ಅಲ್ಲದೆ, ಕರ್ಕೋಟಕನ ವಿಷದಿಂದಲೂ, ನನ್ನ ತಪಶ್ಚರ್ಯದಿಂದಲೂ ಕಲಿಯು ಮತ್ತೂ ಬೇಯುತ್ತಲಿದ್ದನು; ಅದ್ದರಿಂದಲೇ ಆತನು ತಾಪವನ್ನು ಸಹಿಸಲಾರದೆ ನನ್ನ ಶರೀರದಿಂದ ಹೊರಬೀಳಲು, ನಮ್ಮ ದುಃಖದ ಪರಿಸಮಾಪ್ತಿಯಾಗಿರಬಹುದಾಗಿ ತೋರುತ್ತದೆ. ಎಲೈ ಸುಂದರೀ, ಆ ದುಷ್ಟ ಕಲಿಯು ನನ್ನನ್ನು ಬಿಟ್ಟುಹೋದ ಬಳಿಕ, ನಿನ್ನ ಸಲುವಾಗಿಯೇ ನಾನು ಇಲ್ಲಿಗೆ ಬಂದಿರುವೆನು; ಆದರೆ ಸುಂದರೀ, ನೀನು ಹೀಗೆ ನಿನ್ನ ತಂದೆಯ ಮುಖಾಂತರ ಸ್ವಚ್ಛಂದವೃತ್ತಿಯಿಂದ ದೇಶದೇಶಕ್ಕೆ ದೂತರನ್ನು ಕಳಿಸಿ, ಸ್ವಯಂವರವನ್ನು ಸಾರಿಸಬಹುದೆ?

“ಭೀಮಕನ್ಯೆಯು ತನ್ನ ಮನಸ್ಸಿಗೆಬಂದ ಎರಡನೆಯ ಪತಿಯನ್ನು ಲಗ್ನವಾಗುವಳು” ಎಂದು ಪ್ರಸಿದ್ಧಪಡಿಸಬಹುದೆ? ಆ ಸುದ್ದಿಯನ್ನು ಕೇಳಿಯೇ ಋತುಪರ್ಣರಾಜನು ಇಲ್ಲಿಗೆ ಬಂದಿರುವನು” ಅನ್ನಲು, ನಳನ ಈ ಶೋಕ ಜನಕವಾತುಗಳನ್ನು ಕೇಳಿ ದಮಯಂತಿಯು ಅಂಜಿಕೆಯಿಂದ ಥರಥರ ನಡಗುತ್ತ ಕೈ ಜೋಡಿಸಿ—

ದಮಯಂತಿ—ಎಲೈ ನಿಷಧಾಧಿಪತೇ, ನಾನು ದೋಷಿಯೆಂದು ಶಂಕಿಸುವದು ನಿನಗೆ ಯೋಗ್ಯವಲ್ಲ. ದೇವತೆಗಳನ್ನು ನಿರಾಕರಿಸಿ ನಾನು ನಿನ್ನನ್ನು ಲಗ್ನವಾಗಿರುವೆನು. ನಿನ್ನ ಗೊತ್ತುಹಚ್ಚುವದಕ್ಕಾಗಿಯೇ ನಮ್ಮ ತಂದೆಯು ದೇಶದೇಶಗಳಿಗೆ ಬ್ರಾಹ್ಮಣರನ್ನು ಕಳಿಸಿದ್ದನು. ಅವರಲ್ಲಿ ಪರ್ಣಾದನೆಂಬ ಬ್ರಾಹ್ಮಣನು, ನೀನು ಅಯೋಧ್ಯೆಯಲ್ಲಿರುವ ಸುದ್ದಿಯನ್ನು ಕೇಳಿದನು; ಆದ್ದರಿಂದ, ನಿನ್ನನ್ನು ಬರಮಾಡಿಕೊಳ್ಳಬೇಕೆಂತಲೇ, ಒಂದೇದಿನ ನೂರು ಹರದಾರಿ ನಡೆದು ಬರುವ ಲೆಕ್ಕವಿಟ್ಟು ಅಯೋಧ್ಯೆಗೆ ಸುದೇವ ಬ್ರಾಹ್ಮಣನನ್ನು ನಾನೇ ಕಳಿಸಿದ್ದೆನು. ನಿನ್ನ ಹೊರತು ದಿನಕ್ಕೆ ನೂರು ಹರದಾರಿ ಕುದುರೆ ಹೊಡೆಯುವವರು ಮತ್ತೊಬ್ಬರಾರಿರುವರು? ಎಲೈ ನಾಥಾ, ಸರ್ವಸಾಕ್ಷಿಕರಾದ ವಾಯು-ಸೂರ್ಯ-ಚಂದ್ರರಿರುವರು. ನಾನು ದೋಷಿಯಿದ್ದರೆ, ನನ್ನನ್ನು ಅವರು ನಾಶ ಮಾಡಲಿ!

ಈ ಮೇರೆಗೆ ದಮಯಂತಿಯು ನುಡಿಯಲು, ವಾಯುವು ಆಕಾಶವಾಣಿಯಿಂದ— “ಎಲೈ ನಳಾ, ಈಕೆಯು ಏನೂ ಪಾಪ ಮಾಡಿರುವದಿಲ್ಲವೆಂದು ನಾನು ನಿಜವಾಗಿ ಹೇಳುವೆನು. ನಾನು ಮೂರು ವರ್ಷಗಳಿಂದ ಈಕೆಯ ಆಚರಣವನ್ನು ನೋಡುತ್ತ ಬಂದಿದ್ದೇನೆ; ಈಕೆಯನ್ನು ರಕ್ಷಿಸುತ್ತಲೂ ಇದ್ದೇನೆ. ಈಕೆಯು ಸದಾಚಾರರೂಪವಾದ ನಿಧಿಯನ್ನು ಉತ್ತಮ ರೀತಿಯಿಂದ ಕಾಯ್ದುಕೊಂಡಿದ್ದಾಳೆ. ನಿನ್ನ ಪ್ರಾಪ್ತಿಗಾಗಿ ಈಕೆಯು ಹೀಗೆ ಯುಕ್ತಿಯನ್ನು ಯೋಚಿಸಿದ್ದರಿಂದಲೇ, ನಿಮ್ಮಿಬ್ಬರ ಸಮಾಗಮವಾಯಿತು; ಆದ್ದರಿಂದ ನೀನು ಎಷ್ಟುಮಾತ್ರವೂ ಶಂಕಿಸದೆ ನಿನ್ನ ಹೆಂಡತಿಯನ್ನು ಸ್ವೀಕರಿಸು.”

ಹೀಗೆ ವಾಯುವು ಮಾತಾಡುತ್ತಿರುವಾಗ, ಆಕಾಶದಿಂದ ಪುಷ್ಪವೃಷ್ಟಿಯಾಯಿತು; ದೇವದುಂದುಭಿಗಳು ಬಾರಿಸತೊಡಗಿದವು; ಉತ್ಕೃಷ್ಟ

ವಾದ ವಾಯುವು ಬೀಸತೊಡಗಿತು. ಈ ಆಶ್ಚರ್ಯವನ್ನು ನೋಡಿ ನಳನ ಸಂಶಯವು ದೂರವಾಯಿತು. ಆ ಮೇಲೆ ನಳನು ನಾಗಾಧಿಪತಿಯಾದ ಕರ್ಕೋಟಕನನ್ನು ಸ್ಮರಿಸಿ, ಆತನು ಕೊಟ್ಟಿದ್ದ ನಿರ್ಮಲ ವಸ್ತ್ರಗಳನ್ನು ಧರಿಸಿದನು. ಕೂಡಲೆ ಆತನಿಗೆ ಮೊದಲಿನ ದಿವ್ಯದೇಹವು ಪ್ರಾಪ್ತವಾಯಿತು. ಅದನ್ನು ನೋಡಿದಕೂಡಲೆ ಪ್ರಶಂಸನೀಯಳಾದ ಭೀಮಕನ್ಯೆಯು ಪುಣ್ಯ ಶ್ಲೋಕ ನಳನನ್ನು ಅಪ್ಪಿಕೊಂಡು ಗಟ್ಟಿಯಾಗಿ ಕರೆದಳು! ನಳನೂ ಹೆಂಡತಿ ಮಕ್ಕಳನ್ನು ಆಲಿಂಗಿಸಿ ಪರಮಾನಂದ ಪಟ್ಟನು. ಈ ಯಾವತ್ತು ಸಂಗತಿ ಯನ್ನು ದಮಯಂತಿಯ ತಾಯಿಯು ತನ್ನ ಪತಿಯಾದ ಭೀಮರಾಜನಿಗೆ ತಿಳಿಸಲು, ಆತನು— “ಇಂದು ನಳರಾಜನು ಸ್ವಸ್ಥವಿಶ್ರಾಂತಿಯನ್ನು ಹೊಂದಲಿ. ನಾಳೆ ಬೆಳಗಿನಲ್ಲಿ ಆತನು ಸ್ನಾನಮಾಡಿ ಶುಚಿರ್ಭೂತನಾದ ಬಳಿಕ ನಾನು ದಮಯಂತಿಯೊಡನೆ ಆತನನ್ನು ಕಾಣುವೆನು” ಎಂದು ಹೇಳಿದನು. ಈ ಮೇರೆಗೆ ನಾಲ್ಕನೆಯ ವರ್ಷ ಹೆಂಡತಿಯನ್ನು ಕೂಡಿ ನಳರಾಜನು ಆನಂದ ಪಟ್ಟನು; ಮತ್ತು ಪತಿಯ ಅಲಭ್ಯ ಲಾಭದಿಂದ ದಮಯಂತಿಯೂ ಸಂತೋಷಭರಿತಳಾದಳು. ಮರುದಿನ ಭೀಮ ರಾಜನು ನಳ–ದಮಯಂತಿಯರನ್ನು ಕಂಡು ಸತ್ಕರಿಸಿದನು; ಪುರವನ್ನು ಶೃಂಗರಿಸಿ ಸಮಾರಂಭವನ್ನು ಮಾಡಿದನು. ಈ ಎಲ್ಲ ಸಂಗ ತಿಯು ಋತುಪರ್ಣನಿಗೆ ತಿಳಿಯಲು, ಆತನು ನಳನನ್ನು ಸಂತೋಷ ದಿಂದ ಕಂಡನು. ಅವರಿಬ್ಬರು ರಾಜರು ಪರಸ್ಪರ ಕ್ಷಮೆಯನ್ನು ಬೇಡಿ ಕೊಂಡರು. ನಳನು ವಿಧ್ಯುಕ್ತವಾಗಿ ಅಶ್ವವಿದ್ಯೆಯನ್ನು ಋತುಪರ್ಣ ನಿಗೆ ಕೊಟ್ಟು, ಅಕ್ಷವಿದ್ಯೆಯನ್ನು ಆತನಿಂದ ತಾನು ಗ್ರಹಿಸಿದನು. ಬಳಿಕ ಋತುಪರ್ಣನು ಎರಡನೆಯ ಸಾರಥಿಯನ್ನು ಕರಕೊಂಡು ಅಯೋ ಧ್ಯೆಗೆ ಹೋದನು. ನಳರಾಜನು ಕುಂಡಿನೀಪುರದಲ್ಲಿಯೇ ಕೆಲವು ದಿನ ನಿಂತುಕೊಂಡನು.

ನಳನು ಕುಂಡಿನೀಪಟ್ಟಣದಲ್ಲಿ ಒಂದು ತಿಂಗಳು ಇದ್ದು, ಭೀಮರಾಜನ ಅಪ್ಪಣೆಯಿಂದ ಅಲ್ಪ ಪರಿವಾರದೊಡನೆ ನಿಷಧದೇಶಕ್ಕೆ ಹೋದನು. ಪಟ್ಟಣವನ್ನು ಪ್ರವೇಶಿಸಲು ಉತ್ಕಂಠಿತನಾದ ಉದಾರ ಮನಸ್ಸಿನ ನಳರಾಜನು, ಕ್ಷುಬ್ಧನಾಗಿ ನಗರವನ್ನು ಪ್ರವೇಶಿಸಿದನು. ಆತನು

ಪುಷ್ಕರನನ್ನು ಕಂಡು ಆತನನ್ನು ಕುರಿತು—ಪುಷ್ಕರಾ, ನಾನು ವಿಪುಲ ಸಂಪತ್ತನ್ನು ಸಂಪಾದಿಸಿದ್ದೇನೆ. ದಮಯಂತಿಯನ್ನು ಜೂಜಿಗೆ ಹಚ್ಚು ವೆನು. ನೀನು ಯಾವತ್ತು ರಾಜ್ಯವನ್ನೂ ಜೂಜಿಗೆ ಹಚ್ಚು. ಮತ್ತೊಮ್ಮೆ ಜೂಜು ಆಡಬೇಕೆಂದು ನಾನು ಇಚ್ಛಿಸುವೆನು. ಈ ಜೂಜಿನಲ್ಲಿ ನಾನು ಸೋತರೆ, ನನ್ನ ಪ್ರಾಣವನ್ನು ಹಚ್ಚಿ ಮತ್ತೊಂದು ಆಟವನ್ನು ಆಡು ವೆನು. ಇದಕ್ಕೆ ನೀನು ಒಪ್ಪಬೇಕು; ಯಾಕಂದರೆ ಜೂಜಿನಲ್ಲಿ ಸೋತವ ನಿಗೆ ಮತ್ತೊಂದು ಆಟಕೊಡುವದು ಧರ್ಮವಾಗಿರುವದು. ಹೀಗೆ ನೀನು ಜೂಜಿಗೆ ಒಪ್ಪದಿದ್ದರೆ, ನನ್ನೊಡನೆ ಯುದ್ಧಮಾಡು. ವಂಶಪರಂಪರೆ ಯಿಂದ ಬಂದಿರುವ ರಾಜ್ಯವನ್ನು, ಯಾವ ಉಪಾಯದಿಂದಾದರೂ ಸಂಪಾದಿಸಿಕೊಳ್ಳಬೇಕೆಂದು ವೃದ್ಧರು ಹೇಳುವರು; ಆದ್ದರಿಂದ ಎರಡು ಉಪಾಯಗಳಲ್ಲಿ, ಯಾವದನ್ನಾದರೂ ನೀನು ಅವಲಂಬಿಸಲೇ ಬೇಕು. ಒಟ್ಟಿಗೆ, ಕಪಟದಿಂದ ಜೂಜನ್ನಾದರೂ ಆಡು, ಯುದ್ಧಕ್ಕಾಗಿ ಧನು ಸ್ಸನ್ನಾದರೂ ಬಗ್ಗಿಸು!

ನಳನು ಹೀಗೆ ನುಡಿಯಲು, ಪುಷ್ಕರನು ತನಗೆ ನಿಶ್ಚಯವಾಗಿ ಜಯವಾಗುವದೆಂದು ನಂಬಿ ನಳನಿಗೆ—"ನೈಷಧಾ, ನೀನು ಪಣಹಚ್ಚ ಲಿಕ್ಕೆ ಧನ ಸಂಪಾದಿಸಿದ್ದು ಬಹಳ ಸಂತೋಷವು. ಬಹು ದಿವಸದಿಂದ ನನ್ನ ಮನಸ್ಸಿನಲ್ಲಿ ನಟ್ಟಿದ್ದ ದಮಯಂತಿಯು ನನ್ನನ್ನು ಹೊಂದಿ ಸುಖಿಯಾಗಬಹುದು. ನಾನು ಸೌಂದರ್ಯ ಸಂಪನ್ನಳಾದ ದಮಯಂತಿ ಯನ್ನು ಗೆದ್ದು, ಕೃತಕೃತ್ಯನಾಗುವೆನು." ಎಂದು ನುಡಿಯಲು, ಕೋಪ ಸಂತಪ್ತನಾದ ನಳನಿಗೆ, ಪುಷ್ಕರನ ರುಂಡವನ್ನು ಖಡ್ಗದಿಂದ ಕತ್ತರಿಸ ಬೇಕೆನ್ನುವದಾಗಾಯಿತು. ಆದರೂ ಆತನು ಹಾಗೆ ಮಾಡದೆ, ಜೂಜಾಡಿ ಪುಷ್ಕರನ ರಾಜ್ಯವನ್ನು ಗೆದ್ದುಕೊಂಡನು. ಮತ್ತೊಂದು ಜೂಜಿನಲ್ಲಿ ಪುಷ್ಕರನು ಪ್ರಾಣದ ಪಣವನ್ನು ಹಚ್ಚಿ ಆಡಲು, ಅದರಲ್ಲಿಯೂ ನಳನೇ ಜಯಶಾಲಿಯಾದನು. ಆದರೂ ನಳನು ಪುಷ್ಕರನನ್ನು ಕೊಲ್ಲ ಲಿಚ್ಛಿಸದೆ, ಆತನನ್ನು ಕುರಿತು—"ಪುಷ್ಕರಾ, ನಿಷ್ಕಂಟಕವೂ, ಪ್ರತಿ ಬಂಧ ಶೂನ್ಯವೂ ಆದ ರಾಜ್ಯವು ನನ್ನದಿರುವದು. ಎಲೈ ನೃಪಾಧಮಾ, ಇನ್ನು ವಿದರ್ಭ ಕನ್ಯೆಯು ನಿನ್ನ ಕಣ್ಣಿಗೆ ಕೂಡ ಬೀಳಲಾರಳು!

ಮೂರ್ಖಾ, ಈಗ ನೀನೂ, ನಿನ್ನ ಪರಿವಾರವೂ ಆಕೆಯ ದಾಸರಾದಿರಿ; ಮೊದಲು ನೀನು ನನ್ನನ್ನು ಗೆದ್ದದ್ದದ್ದಾರೂ ನಿನ್ನ ಪೌರುಷದಿಂದಲ್ಲ; ಕಲಿಯ ಕರ್ತೃತ್ವದಿಂದ! ಎರಡನೆಯವರ ಅಪರಾಧವನ್ನು ನಿನ್ನಮೇಲೆ ಹೊರಿಸುವದಿಲ್ಲ. ನೀನು ಸಂತೋಷದಿಂದ ಜೀವಿಸಿ ಇರು. ನಿನಗೆ ಪ್ರಾಣದಾನ ಮಾಡುವೆನು. ಮೊದಲಿನಂತೆ ನಿನ್ನ ಎಲ್ಲ ಸಾಮಗ್ರಿಯನ್ನೂ, ನಿನ್ನ ಪಾಲಿನ ರಾಜ್ಯವನ್ನೂ ನಿನಗೆ ಕೊಡುವೆನು. ಎಲೈ ವೀರಾ, ಮೊದಲಿನಂತೆ ನಿನ್ನ ಮೇಲೆ ನನ್ನ ಪ್ರೇಮವು ನಿಸ್ಸಂಶವಾಗಿ ಇರುವದು. ಇಂದಿನಿಂದ ಮುಂದೆಯೂ ನನ್ನಿಂದ ನಿನ್ನ ಸ್ನೇಹದಲ್ಲಿ ಅಂತರವಾಗಲಿಕ್ಕಿಲ್ಲ. ನೀನು ನನ್ನ ಬಂಧುವಿರುವೆ, ನೂರುವರ್ಷ ಬಾಳು." ಎಂದು ಹೇಳಿದನು. ಪುಷ್ಕರನಾದರೂ ತನಗೆ ಪ್ರಾಣದಾನಮಾಡಿ, ತನ್ನ ರಾಜ್ಯವನ್ನು ತನಗೆ ಕೊಟ್ಟದ್ದಕ್ಕಾಗಿ, ನಳನನ್ನು ಕೈಜೋಡಿಸಿ ಪ್ರಾರ್ಥಿಸಿ, ಆತನ ಬಳಿಯಲ್ಲಿ ಒಂದು ತಿಂಗಳು ಇದ್ದು, ಆತನ ಅನುಜ್ಞೆಯಿಂದ ಸೈನ್ಯದೊಡನೆ ತನ್ನ ರಾಜ್ಯಕ್ಕೆ ಹೋದನು. ನಳರಾಜನ ಪ್ರಜೆಗಳು ಅಮಾತ್ಯರೊಡನೆ ನಳರಾಜನನ್ನು ಕಂಡು ಕೈಜೋಡಿಸಿ—"ನಳಮಹಾರಾಜಾ, ಇಂದ್ರನ ಸೇವೆಯು ದೇವತೆಗಳಿಗೆ ಒದಗಿದಂತೆ ನಿನ್ನ ಸೇವೆಯು ನಮಗೆ ಒದಗಿದ್ದಕ್ಕಾಗಿ ನಮಗೆ ಬಹಳ ಸಂತೋಷವಾಗಿರುವದು" ಎಂದು ಪ್ರಾರ್ಥಿಸಿ ಆತನನ್ನು ಅಭಿನಂದಿಸಿದರು.

---

## ಉಪಸಂಹಾರ.

ನಳರಾಜನ ಆಗಮನದಿಂದ ಪ್ರಜೆಗಳು ಸಂತುಷ್ಟರಾಗಿ, ನಗರದಲ್ಲಿ ಮಹೋತ್ಸವವನ್ನು ನಡೆಸಿರಲು, ನಳನು ಸೈನ್ಯವನ್ನು ಕೊಟ್ಟು ದಮಯಂತಿಯನ್ನು ಕರೆಸಿಕೊಂಡನು. ಜಂಬುದ್ವೀಪದಲ್ಲಿ ಪ್ರಸಿದ್ಧರಾಜನಾಗಿ ನಳನು ರಾಜ್ಯವಾಳಹತ್ತಿದನು. ಆತನು ವಿಪುಲ ದಕ್ಷಿಣೆಕೊಟ್ಟು ಯಜ್ಞ

ಗಳನ್ನು ಮಾಡಿದನು. ಈ ನಲಚರಿತ್ರ-ಶ್ರವಣಮಾಡಿದವರಿಗೆ ಕಲಿಯ ವಚನದಂತೆ ಕಲಿಬಾಧೆಯು ತಟ್ಟುವದಿಲ್ಲ. “ಕರ್ಕೋಟಕಸ್ಯ ನಾಗಸ್ಯ | ದಮಯಂತ್ಯಾ ನಲಸ್ಯಚ || ಋತುಪರ್ಣಸ್ಯ ರಾಜರ್ಷೇಃ | ಕೀರ್ತನಂ ಕಲಿ ನಾಶನಂ||”ಅಂದರೆ ಕರ್ಕೋಟಕನಾಗ, ದಮಯಂತಿ, ನಳ, ರಾಜರ್ಷಿ ಋತು ಪರ್ಣ ಇವರ ನಾಮಸಂಕೀರ್ತನ ಮಾಡುವವರಿಗೆ, ಕಲಿದೋಷವು ನಾಶವಾಗುವದೆಂದು” ಕಲಿಯೇ ಹೇಳಿರುವನು. ಯಾವಾಗಲೂ ಈ ನಲಾಖ್ಯಾನವನ್ನು ಶ್ರವಣಮಾಡುವವರಿಗೂ, ಧರ್ಮಿಷ್ಠರಿಗೂ, ಯೋಗಾ ಭ್ಯಾಸಿಗಳಿಗೂ, ಯಾವಾಗಲೂ ಸರಳರೀತಿಯಿಂದ ನಡೆಯುವವರಿಗೂ ಕಲಿಬಾಧೆಯು ಎಲ್ಲಿಯದು? ಈ ನಲಚರಿತ್ರವನ್ನು ಶ್ರವಣಮಾಡುವ ವರಿಗೂ, ಮಾಡಿಸುವವರಿಗೂ ವಿಪತ್ತು ಬರಲಾರದು; ಅಲ್ಲದೆ ಅವರ ಮನೋರಥಗಳೆಲ್ಲ ಪೂರ್ಣವಾಗುವವು. ಈ ಪುರಾತನ ಚರಿತ್ರವನ್ನು ಶ್ರವಣಮಾಡುವವರಿಗೆ ಪುತ್ರ-ಪೌತ್ರ-ಪಶುಗಳ ಪ್ರಾಪ್ತಿಯಾಗಿ, ಅವರು ಮನುಷ್ಯರಲ್ಲಿ ಅಗ್ರಗಣ್ಯರೂ, ಆರೋಗ್ಯಸಂಪನ್ನರೂ, ಆನಂದಿತರೂ ಆಗುವಲ್ಲಿ ಸಂಶಯವಿಲ್ಲ.

---

## ರಹಸ್ಯಗಳು.

ಈ ನಳಚರಿತ್ರದಲ್ಲಿಯ ದಮಯಂತಿಯ ನಡತೆಯನ್ನು ಕುರಿತು ಆಲೋಚಿಸಿದರೆ, ಆಕೆಯು ಪತಿಯನ್ನು, ಅಥವಾ ತಾಯಿತಂದೆಗಳನ್ನು, ಅಥವಾ ಗುರುಹಿರಿಯರನ್ನು ಅನುಸರಿಸಿ ನಡೆದಿರುವಳಲ್ಲದೆ, ಸ್ವತಂತ್ರದಿಂದ ನಡೆದಿರುವದಿಲ್ಲ; ಅದರಂತೆ ತನಗೆ ಎಷ್ಟು ಕಷ್ಟಬಂದಿದ್ದರೂ, ಆ ದಮಯಂ ತಿಯು ತನ್ನ ಆ ಕಷ್ಟಕ್ಕೆ ತನ್ನ ದುರ್ದೈವವು ಕಾರಣವಲ್ಲದೆ ತನ್ನ ಪತಿಯು ಕಾರಣನೆಂದು ಆಕೆಯು ಪತಿಗೆ ದೋಷವನ್ನು ಆರೋಪಿಸಲಿಲ್ಲ; ಅದರಂತೆ, ಪ್ರೌಢವಯಸ್ಸಿನ ಆ ದಮಯಂತಿಯು, ತಾನು ಮನಸ್ಸಿನಿಂದ ನಳನೇ ಗಂಡ ನೆಂದು ನಿಶ್ಚಯಿಸಿರಲು, ಆಕೆಯ ಆ ನಿಶ್ಚಯದಂತೆ ನಳನೇ ಆಕೆಗೆ ಪತಿ ಯಾಗಬೇಕಾದರೆ, ಆಕೆಯು ತನ್ನ ಸದ್ಗುಣಗಳ ಸಾಕ್ಷಿಯಿಂದ ಇಂದ್ರಾದಿ

ದೇವತೆಗಳನ್ನು ಪ್ರಸನ್ನೀಕರಿಸಿಕೊಳ್ಳಬೇಕಾಯಿತು; ಇಲ್ಲದಿದ್ದರೆ, ಆಕೆಯು ತನ್ನ ಮನಸ್ಸಿನ ನಿಶ್ಚಯವನ್ನು ಕಳಕೊಂಡು, ನಳನಲ್ಲದ ಬೇರೆ ಪತಿಯನ್ನು ಲಗ್ನಮಾಡಿಕೊಂಡು ವ್ಯಭಿಚಾರದೋಷಕ್ಕೆ ಗುರಿಯಾಗಬೇಕಾಗುತ್ತಿತ್ತು; ಅಥವಾ ತನ್ನ ಸತೀತ್ವವನ್ನು ಕಾಯ್ದುಕೊಳ್ಳುವದಕ್ಕಾಗಿ ಆಕೆಯು ಆಜನ್ಮ ಬ್ರಹ್ಮಚರ್ಯದಿಂದ ಇರಬೇಕಾಗಿತ್ತು; ಅಥವಾ ಅದು ಸಾಧಿಸದಿದ್ದರೆ ತನ್ನ ಪ್ರಾಣವನ್ನು ಕಳಕೊಂಡಾದರೂ ತನ್ನ ಸತೀತ್ವವನ್ನು ಕಾಯ್ದುಕೊಳ್ಳಬೇಕಾಗುತ್ತಿತ್ತು; ಆದರೆ ಈಗಿನ ಸ್ತ್ರೀಯರ ಸರ್ವಸಾಮಾನ್ಯವಾದ ಆಚರಣೆಯನ್ನು ನೋಡಿದರೆ, ದಮಯಂತಿಯು ಲೋಕವಿಲಕ್ಷಣಳೆಂದು ಹೇಳಬೇಕಾಗುವದು; ಈಗಿನಕಾಲದಲ್ಲಿಯಾದರೂ ದಮಯಂತಿಯಂಥ ಘನವಾದ ಯೋಗ್ಯತೆಯು ಸ್ತ್ರೀಯರು ತೀರಅಪರೂಪವಾಗಿಯಾದರೂ ಇದ್ದೇ ಇರುವರು. ಇಂಥ ಅಪರೂಪದ ಸಾಧ್ವೀಸ್ತ್ರೀಯರ ನಡತೆಯನ್ನೂ, ಪತಿಘಾತಕರಾದ ಸಾಹಸೀಸ್ತ್ರೀಯರ ನಡತೆಯನ್ನೂ ಮನಸ್ಸಿನಲ್ಲಿ ತಂದರೆ, ಸ್ತ್ರೀಯರಸಂಬಂಧದಿಂದ ಮುಂದಿನ ಮೂರು ಮಾತುಗಳನ್ನು ಕುರಿತು ವಿಚಾರಮಾಡಬೇಕಾಗುವದು. ಆಮೂರು ಮಾತುಗಳು—೧ ಸ್ತ್ರೀಯರಿಗೆ ಸ್ವಾತಂತ್ರ್ಯ ಕೊಡಬಹುದೋ? ೨ ಸ್ತ್ರೀಯರಲ್ಲಿ ಎಷ್ಟು ವರ್ಗಗಳನ್ನು ಮಾಡಬಹುದು? ಬಾಲವಿವಾಹ—ಪ್ರೌಢವಿವಾಹಗಳಲ್ಲಿ ಯಾವದು ಹಿತಕರ? ಎಂಬವು. ಈ ಮೂರು ಮಾತುಗಳನ್ನು ಕುರಿತು ವಿಚಾರಿಸುವದು ಈಗಿನಕಾಲದಲ್ಲಿ ಅತ್ಯವಶ್ಯವೆಂದೂ, ಸ್ತ್ರೀಜಾತಿಯ ಕಲ್ಯಾಣಕ್ಕೆ ಕಾರಣವೆಂದೂ ನಾವು ತಿಳಿದು, ಅವನ್ನು ಕ್ರಮವಾಗಿ ಸಂಕ್ಷೇಪದಿಂದ ಇಲ್ಲಿ ವಿಚಾರಿಸುವೆವು.

---

## ೧ ಸ್ತ್ರೀಯರಿಗೆಸ್ವಾತಂತ್ರ್ಯ ಕೊಡಬಹುದೋ?

ಸ್ತ್ರೀಯರ ಪಾರತಂತ್ರ್ಯವು ಸ್ವಾಭಾವಿಕವಾಗಿದ್ದು, ಅದು ಅವರ ಕಲ್ಯಾಣಕ್ಕಾಗಿಯೇ ಇರುತ್ತದೆಂದು ತಿಳಿಯಬೇಕಾಗುತ್ತದೆ; ಆದರೆ ಅದು ಹೇಗೆಂಬದನ್ನು ಕುರಿತು ತತ್ವತಃ ಅತಿಸಂಕ್ಷೇಪದಲ್ಲಿ ವಿಚಾರಿ

ಸೋಣ. ಈ ಜಗತ್ತಿನೊಳಗಿನ ವಸ್ತುಗಳು ಸಚೇತನವೆಂತಲೂ, ಅಚೇತನವೆಂತಲೂ ಎರಡು ವಿಧವಾಗಿರುವವಷ್ಟೆ? ಮೊದಲು ಅಚೇತನವಸ್ತುಗಳಲ್ಲಿ ಕೂಡ ಈ ಸ್ವಾತಂತ್ರ್ಯ-ಪಾರತಂತ್ರ್ಯಗಳು, ಸ್ವಯಂಸಿದ್ಧವಾಗಿ ಹೇಗೆ ಇರುತ್ತವೆಂಬದನ್ನು ಆಲೋಚಿಸೋಣ. ಸೂರ್ಯಗೋಲವು ಅಚೇತನ ವಸ್ತುವಾಗಿದ್ದು, ಅದು ಪೃಥ್ವ್ಯಾದಿ ಗ್ರಹಗಳಿಗಿಂತ ಬಹಳ ದೊಡ್ಡದಾಗಿರುತ್ತದೆ; ಆದ್ದರಿಂದ ಆ ಪೃಥ್ವಿಯೇ ಮೊದಲಾದ ಗ್ರಹಗಳು, ಸೂರ್ಯನ ಗುರುತ್ವಾಕರ್ಷಣದಮೂಲಕ ಆತನಿಗೆ ಅಧೀನಗಳಾಗಿ, ಪಾರತಂತ್ರ್ಯದಿಂದ ಆತನಸುತ್ತು ತಿರುಗುತ್ತವೆಂಬ ಮಾತು ಶಾಸ್ತ್ರದಿಂದ ಸಿದ್ಧವಾಗಿರುತ್ತದೆ. ಅದರಂತೆ, ಪೃಥ್ವಿಯಮೇಲಿನ ವಸ್ತುಗಳೆಲ್ಲ ಪೃಥ್ವಿಯ ಗುರುತ್ವದ ಆಕರ್ಷಣದ ಮೂಲಕ ಪರತಂತ್ರಗಳಾಗಿ, ಅದನ್ನು ಅತಿಕ್ರಮಿಸಿ ಹೋಗಲಾರವೆಂಬಮಾತು ಅನುಭವಸಿದ್ಧವಾಗಿರುವದು. ಹೀಗೆ ಜಡಪದಾರ್ಥಗಳಲ್ಲಿ ಲಘುತ್ವ-ಗುರುತ್ವಗಳು ಉಂಟಾಗಲಿಕ್ಕೆ, ಅವುಗಳಲ್ಲಿರುವ ಘಟಕದ್ರವ್ಯಗಳ ನ್ಯೂನಾಧಿಕ್ಯಗಳೇ ಕಾರಣವೆಂದು ಶಾಸ್ತ್ರತಃ ಸಿದ್ಧವಾಗಿರುತ್ತದೆ.

ಇನ್ನು, ಸಚೇತನಪದಾರ್ಥಗಳ ಸ್ವಾತಂತ್ರ್ಯ-ಪಾರತಂತ್ರ್ಯಗಳನ್ನು ಕುರಿತು ವಿಚಾರಮಾಡೋಣ. ಸಚೇತನಪದಾರ್ಥಗಳೆಂದರೆ, ಚೇತನವುಳ್ಳ ಜಡಪದಾರ್ಥಗಳೆಂದು ತಿಳಿಯತಕ್ಕದ್ದು. ಜಗತ್ತು ಚೇತನಾಮಯವಾದದ್ದೆಂದು ಸಿದ್ಧಾಂತವಿರುದರಿಂದ, ಅಚೇತನಪದಾರ್ಥಗಳಲ್ಲಿ ಚೇತನವು ಸುಪ್ತಾವಸ್ಥೆಯಲ್ಲಿರುತ್ತದೆಂತಲೂ, ಸಚೇತನಪದಾರ್ಥಗಳಲ್ಲಿ ಅದು ಜಾಗೃದವಸ್ಥೆಯಲ್ಲಿರುತ್ತದೆಂತಲೂ ನಮ್ಮ ಅನುಭವದೃಷ್ಟಿಯಿಂದ ಹೇಳಬೇಕಾಗುವದು. ಜಡಪದಾರ್ಥಗಳ ಲಘುತ್ವ-ಗುರುತ್ವಗಳಿಗೆ ಅವುಗಳ ಘಟಕದ್ರವ್ಯಗಳ ನ್ಯೂನಾಧಿಕ್ಯಗಳು ಕಾರಣವೆಂದು ಮೇಲೆ ಹೇಳಿದೆಯಷ್ಟೆ? ಸಚೇತನಪದಾರ್ಥಗಳಲ್ಲಿ ಜಡಗಳಾದ ಅವುಗಳ ದೇಹಗಳೇ ಪ್ರಾಮುಖ್ಯವಾಗಿ ದೃಶ್ಯವಾಗಿರುವದರಿಂದ, ಸಚೇತನಪದಾರ್ಥಗಳ ಲಘುತ್ವ-ಗುರುತ್ವಗಳಿಗೂ ಈ ಘಟಕದ್ರವ್ಯಗಳ ನ್ಯೂನಾಧಿಕ್ಯವು ಪ್ರಥಮ ಕಾರಣವಾಗಿರುತ್ತದೆಂದು ತಿಳಿಯತಕ್ಕದ್ದು.

ಹೀಗೆ ಸಚೇತನಪದಾರ್ಥಗಳ ಸ್ವಾತಂತ್ರ್ಯ-ಪಾರತಂತ್ರ್ಯಗಳಿಗೆ ಅವುಗಳ ದೇಹಗಳಲ್ಲಿಯ ಘಟಕದ್ರವ್ಯಗಳ ನ್ಯೂನಾಧಿಕ್ಯವು ಪ್ರಥಮಕಾರ

ಣವಾಗಿರುವದಲ್ಲದೆ, ಚೇತನದ ಯೋಗದಿಂದ ಆ ಸಚೇತನಪದಾರ್ಥಗಳ ದೇಹಗಳ ದ್ವಾರದಿಂದ ಪ್ರಕಟವಾಗುವ ಶಾರೀರಬಲ, ಬುದ್ಧಿಬಲ, ವಿಕಾರ ರಾಹಿತ್ಯ ಇವುಗಳ ನ್ಯೂನಾಧಿಕ್ಯಗಳು ಮುಖ್ಯಕಾರಣಗಳಾಗಿರುತ್ತವೆ. ಇವುಗಳ ಸ್ಪಷ್ಟೀಕರಣಕ್ಕಾಗಿ, ಆನೆ-ಸಿಂಹಗಳೆಂಬ ಎರಡು ಸಚೇತನ ಪದಾರ್ಥಗಳನ್ನು ಉದಾಹರಣೆಗಾಗಿ ತಕ್ಕೊಳ್ಳೋಣ. ಸಿಂಹದ ದೇಹದ ಲ್ಲಿಗಿಂತ ಆನೆಯ ದೇಹದಲ್ಲಿ ಘಟಕದ್ರವ್ಯಗಳ ಮಾನವು ಹೆಚ್ಚು ಇರುವದ ರಿಂದಲೂ, ಸಿಂಹಕ್ಕಿಂತ ಆನೆಯು ಬಲಿಷ್ಠವಾಗಿರುವದರಿಂದಲೂ ಆನೆಯು ಸಿಂಹದ ಸಂಬಂಧದ ಗುರುತ್ವವನ್ನು ಪಡೆಯಬಹುದಾಗಿತ್ತು; ಆದರೆ ಅತ್ಯಂತ ಮಹತ್ವದ ಬುದ್ಧಿಬಲದ ಪರಾಕ್ರಮ-ಶೌರ್ಯ-ಧೈರ್ಯಾದಿ ಗುಣಗಳು ಆನೆಗಿಂತ ಸಿಂಹದಲ್ಲಿ ಹೆಚ್ಚು ಇರುವವು; ಮತ್ತು ಆನೆಯು ಸಿಂಹವನ್ನು ಕಂಡು ಹೆದರಿ ಮಾನಸಿಕ-ದೈಹಿಕ ವಿಕಾರಗಳನ್ನು ಹೊಂದಿ ದಷ್ಟು ಸಿಂಹವು ಹೊಂದುವದಿಲ್ಲ; ಅರ್ಥಾತ್ ಆನೆಗಿಂತ ಸಿಂಹದಲ್ಲಿ ವಿಕಾ ರರಾಹಿತ್ಯವು ಹೆಚ್ಚು ಇದ್ದಂತಾಯಿತು. ಹೀಗೆ ಒಟ್ಟಿನೊಳಗೆ ಸಿಂಹದಲ್ಲಿ ಆನೆ ಗಿಂತ ಬುದ್ಧಿಬಲ-ವಿಕಾರರಾಹಿತ್ಯ ಇವು ಹೆಚ್ಚು ಇದ್ದಂತಾದವು; ಆದ್ದರಿಂ ದಲೇ ಆನೆಯುಬದಲು ಸಿಂಹವು ಗುರುತ್ವವನ್ನು ಹೊಂದಿರುವದು. ಸಾರಾಂಶ, ಸಚೇತನ ಪದಾರ್ಥಗಳ ಲಘುತ್ವ-ಗುರುತ್ವಗಳಿಗೆ ಅವುಗಳ- ೧ ಘಟಕದ್ರವ್ಯ ೨ ಶಾರೀರಬಲ ೩ ಬುದ್ಧಿಬಲ ೪ ವಿಕಾರರಾಹಿತ್ಯ ಎಂಬ ನಾಲ್ಕರ ನ್ಯೂನಾಧಿಕ್ಯಗಳು ಕಾರಣವಾಗಿರುವವೆಂದು ತಿಳಿಯತಕ್ಕದ್ದು.

ಮೇಲೆ ಅತ್ಯಂತ ಮಹತ್ವದ್ದೆಂದು ಹೇಳಿರುವ ಬುದ್ಧಿಬಲದ ನ್ಯೂನಾ ಧಿಕ್ಯಗಳ ದೃಷ್ಟಿಯಿಂದ, ಸಚೇತನ ಪದಾರ್ಥಗಳಲ್ಲಿ ತಿರ್ಯಗ್‌ಯೋನಿ ಯೆಂತಲೂ, ಮನುಷ್ಯಯೋನಿಯೆಂತಲೂ, ದೇವಯೋನಿಯೆಂತಲೂ ಮೂರುವರ್ಗಗಳನ್ನು ಮಾಡಬೇಕಾಗುವದು. ಇವು ಮೂರುವರ್ಗಗಳು ಉತ್ತರೋತ್ತರ ಶ್ರೇಷ್ಠಕೋಟಿಯ ಯೋನಿಗಳಾಗಿರುತ್ತವೆ; ಅಂದರೆ ಆನೆ-ಸಿಂಹ ಮೊದಲಾದ ತಿರ್ಯಗ್‌ಯೋನಿಗಿಂತ ಮನುಷ್ಯಯೋನಿಯು ಶ್ರೇಷ್ಠ, ಮನುಷ್ಯಯೋನಿಗಿಂತ ದೇವಯೋನಿಯು ಶ್ರೇಷ್ಠ! ಈ ಶ್ರೇಷ್ಠ ತ್ವದ ಸ್ಥಾಪನೆಗೆ ಪ್ರಾಮುಖ್ಯವಾಗಿ ಬುದ್ಧಿಬಲದ ಉತ್ತರೋತ್ತರ ಆಧಿಕ್ಯವು ಕಾರಣವಾಗಿದ್ದರೂ, ಆ ಬುದ್ಧಿಬಲದ ಪ್ರಭಾವರೂಪವಾದ ಧರ್ಮಾಚರ

ಣೆಯ ನ್ಯೂನಾಧಿಕ್ಯಗಳೂ ಕಾರಣವಾಗಿರುವವು; ಅಂದರೆ ತಿರ್ಯಗ್ ಯೋನಿಗೆ ಧರ್ಮಾಧರ್ಮವಿಚಾರವಿಲ್ಲದೆ, ಅದು ಕೇವಲ ಹುಟ್ಟುಗುಣದಂತೆ ನಡೆಯುವದರಿಂದ ಅದು ಎಲ್ಲಕ್ಕೂ ಹೀನ; ಮನುಷ್ಯಯೋನಿಯಲ್ಲಿ ಧರ್ಮಜ್ಞಾನವಿರುವದರಿಂದ ತಿರ್ಯಗ್ಯೋನಿಗಿಂತ ಅದು ಶ್ರೇಷ್ಠ; ದೇವಯೋನಿಯು ಧರ್ಮಮಯವಾಗಿರುವದರಿಂದ ಮನುಷ್ಯಯೋನಿಗಿಂತಲೂ ಅದು ಅತ್ಯಂತ ಶ್ರೇಷ್ಠ! ಈ ಎಲ್ಲ ವಿವೇಚನವನ್ನು ಮನಸ್ಸಿನಲ್ಲಿ ತಂದು, ಈಗ ನಾವು ನಿರ್ಣಯಿಸಬೇಕಾಗಿರುವ ಮನುಷ್ಯಯೋನಿ-ದೇವಯೋನಿಗಳ, ಪ್ರಮುಖ್ಯವಾಗಿ ಮನುಷ್ಯಯೋನಿಯ ಲಘುತ್ವ-ಗುರುತ್ವಗಳಿಗೆ— ೧ ಘಟಕದ್ರವ್ಯ ೨ ಶಾರೀರಬಲ ೩ ಬುದ್ಧಿಬಲ ೪ ವಿಕಾರವಶತೆ ೫ ಧರ್ಮಪಾಲನ ಈ ಐದರ ನ್ಯೂನಾಧಿಕ್ಯಗಳು ಕಾರಣವಾಗಿರುತ್ತಾದೆಂದು ತಿಳಿಯುತಕ್ಕದ್ದು.

ಇನ್ನು, ಮೇಲಿನ ಐದುಕಾರಣಗಳ ಯೋಜನೆಯಿಂದ, ಮನುಷ್ಯಯೋನಿ-ದೇವಯೋನಿಗಳಲ್ಲಿಯ ಸ್ತ್ರೀಪುರುಷರಲ್ಲಿ, ಸೃಷ್ಟಿಕರ್ತನ ಸಂಕೇತದಂತೆ ಸ್ತ್ರೀಯರು ಪುರುಷರಿಗೆ ಅಧೀನರೋ, ಪುರುಷರು ಸ್ತ್ರೀಯರಿಗೆ ಅಧೀನರೋ ಎಂಬವನ್ನು ಕುರಿತು ವಿಚಾರಮಾಡೋಣ. ವಾಡಿಕೆಯಾಗಿ ಸ್ತ್ರೀ-ಪುರುಷರ ಶರೀರಯಷ್ಟಿಗಳ ಅವಲೋಕನಮಾಡಿದರೆ, ಹಲಕೆಲವು ಅಪವಾದಗಳನ್ನು ಬಿಟ್ಟು, ಒಟ್ಟಿನಲ್ಲಿ ಪುರುಷರು ದೃಢಕಾಯರೂ, ಸ್ತ್ರೀಯರು ಕೋಮಲಕಾಯರೂ ಇರುವರೆಂಬ ಮಾತು ಅನುಭವಸಿದ್ಧವಾಗಿರುವದು; ಆದ್ದರಿಂದ ಘಟಕದ್ರವ್ಯಗಳ ಆಧಿಕ್ಯವು, ಸ್ತ್ರೀಯರದೇಹಕ್ಕಿಂತ ಪುರುಷರ ದೇಹದಲ್ಲಿಯೇ ಹೆಚ್ಚು ಇರಬೇಕಾದದ್ದರಿಂದ, ಒಂದನೆಯ ಕಾರಣದಂತೆ ಸ್ತ್ರೀಯರೇ ಪುರುಷರ ಅಧೀನರಾಗಿರಬೇಕಾಗುವದು.

ಇನ್ನು ಎರಡನೆಯ ಕಾರಣವಾದ ಶಾರೀರಬಲದ ದೃಷ್ಟಿಯಿಂದಲೂ ಇದೇಮಾತು ಸಿದ್ಧವಾಗುವದು. ಪುರುಷರು ಸ್ತ್ರೀಯರಿಗಿಂತಲೂ ಶಾರೀರಬಲದಲ್ಲಿ ವರಿಷ್ಠರಾಗಿರುವದರಿಂದಲೇ, ಯುದ್ಧಾದಿ ಶಾರೀರಬಲದ ಕೆಲಸಗಳಲ್ಲಿ, ಅಲ್ಪಸ್ವಲ್ಪ ಅಪವಾದಗಳನ್ನು ಬಿಟ್ಟರೆ, ರಣಶೂರರು ಪುರುಷರೇ ಎಂದು ಎಣಿಸಲ್ಪಟ್ಟಿರುವದರಿಂದ, ಅನಾದಿಕಾಲದಿಂದ ಪುರುಷರೇ ಸೈನ್ಯದಲ್ಲಿ ಸೇರುತ್ತ ಬಂದಿರುವರು. ಅದರಂತೆ, ಮಲ್ಲಯುದ್ಧಾದಿಗಳು ಪುರುಷರವೆಂ

ದಲ್ಲದೆ ಸ್ತ್ರೀಯರವೆಂದು ತಿಳಿಯುತ್ತ ಬಂದಿರುವದಿಲ್ಲ. ಈ ಮಾತಿಗೆ ಅಲ್ಲೊಂದು ಇಲ್ಲೊಂದು ಅಪವಾದವಿದ್ದರೂ ಇರಬಹುದು; ಆದರೆ ಒಟ್ಟಿನಲ್ಲಿ ಪುರುಷರು ಬಲಿಷ್ಠರೂ, ಸ್ತ್ರೀಯರು ಅಬಲೆಯರೂ ಆಗಿರುವದರಿಂದ, ಈ ಎರಡನೆಯ ಕಾರಣದಿಂದಲೂ ಸ್ತ್ರೀಯರು ಪುರುಷರಿಗೆ ಅಧೀನರಾಗಿರಬೇಕಾಗುವದು.

ಇನ್ನು ಮೂರನೆಯ ಕಾರಣವಾದ ಬುದ್ಧಿಬಲದ ಮಾತೂ ಹೀಗೆಯೇ ಸರಿ. ಓದುಬರಹ ಬರುವದು, ಅಥವಾ ವಾಕ್ಪಟುತ್ವವನ್ನು ತೋರಿಸುವದು, ಅಥವಾ ಲೇಖನಕಲಾನೈಪುಣ್ಯವನ್ನು ಸಂಪಾದಿಸುವದು ಬುದ್ಧಿಪ್ರಭಾವದ ಮುಖ್ಯ ಲಕ್ಷಣಗಳಲ್ಲ. ಜಗತ್ಕಲ್ಯಾಣಕಾರಕಗಳಾದ ಲೌಕಿಕ ಪಾರಮಾರ್ಥಿಕ ಶೋಧಗಳನ್ನು ಮಾಡುವದೂ, ವಿವಿಧಬಗೆಯ ಉದಾತ್ತತೆಗಳಿಂದ ಪರರನ್ನು ಆಕ್ರಮಿಸುವದೂ ಬುದ್ಧಿಪ್ರಭಾವದ ಮುಖ್ಯ ಲಕ್ಷಣಗಳಾಗಿರುತ್ತವೆ. ಈ ದೃಷ್ಟಿಯಿಂದ ನೋಡಿದರೆ, ಅನಾದಿಕಾಲದಿಂದ ಇಡಿಯ ಜಗತ್ತಿನೊಳಗಿನ ಯಾವತ್ತು ದೇಶಗಳಲ್ಲಿ, ಅತ್ಯಲ್ಪ ಅಪವಾದಗಳನ್ನು ಬಿಟ್ಟರೆ, ಪುರುಷರೇ ಎರಡೂ ಬಗೆಯ ಶೋಧಮಾಡುವಲ್ಲಿ, ಹಾಗು ಪರಾಕ್ರಮದಲ್ಲಿ ಮುಂದುವರಿದಿರುವರಲ್ಲದೆ, ಸ್ತ್ರೀಯರು ಮುಂದುವರಿದಿರುವದಿಲ್ಲವು; ಆದ್ದರಿಂದ ಬುದ್ಧಿಯ ಆಧಿಕ್ಯದಿಂದಲೂ ಸ್ತ್ರೀಯರು ಪುರುಷರಿಗೆ ಅಧೀನರಾಗಿರಬೇಕಾಗುವದು.

ಇನ್ನು ನಾಲ್ಕನೆಯ ಕಾರಣವಾದ ವಿಕಾರರಾಹಿತ್ಯದ ದೃಷ್ಟಿಯಿಂದ ವಿಚಾರ ಮಾಡೋಣ. ವಿಕಾರಗಳು ಮಾನಸಿಕ, ದೈಹಿಕ ಎಂದು ಎರಡು ವಿಧವಾಗಿರುವವು. ಮಾನಸಿಕ ವಿಕಾರವೆಂದರೆ, ಕ್ರೋಧ, ಭಯ, ದುಃಖ, ಆನಂದ, ಲಜ್ಜಾ ಮುಂತಾದವುಗಳ ಯೋಗದಿಂದಾಗುವ ಮಾನಸಿಕ ಸ್ವರೂಪಭೇದಗಳು. ದೈಹಿಕವಿಕಾರವೆಂದರೆ, ಬಾಲ್ಯ, ತಾರುಣ್ಯ, ವಾರ್ಧಕ್ಯ ಮುಂತಾದವುಗಳ ಯೋಗದಿಂದ ಆಗುವ ದೈಹಿಕ ಸ್ವರೂಪಭೇದಗಳು. ಇವೆರಡು ಬಗೆಯ ವಿಕಾರಗಳೂ ಪುರುಷರಿಗಿಂತ ಸ್ತ್ರೀಯರಿಗೇ ಹೆಚ್ಚು ಆಗುವವು. ಯಾಕಂದರೆ ಮೇಲೆ ಹೇಳಿದ ಕ್ರೋಧ, ಭಯ, ದುಃಖ, ಆನಂದ, ಲಜ್ಜಾ ಮೊದಲಾದವುಗಳ ಪರಿಣಾಮಗಳು ಸ್ತ್ರೀಯರ ಮನಸ್ಸಿನಮೇಲೆ ಅಲ್ಪಕಾರಣಗಳಿಂದ ತಟ್ಟನೆ ಆಗಿ ಅಲ್ಪಕಾರಣಗಳಿಂದ ತಟ್ಟನೆ ಹೋಗುವವು.

ಆದರೆ ಪುರುಷರಿಗೆ ಅಷ್ಟಕ್ಕಿಷ್ಟಕ್ಕೆ ಹಾಗೆ ವಿಕಾರಗಳಾಗುವವಿಲ್ಲ. ಆದ ವಿಕಾರಗಳು ತಟ್ಟನೆ ಹೋಗುವದೂ ಇಲ್ಲ. ಅದರಂತೆ, ಬಾಲ್ಯ, ತಾರುಣ್ಯ, ವಾರ್ಧಕ್ಯಗಳ ಮೂಲಕ ಆಗುವ ದೈಹಿಕ ವಿಕಾರಗಳು ಸ್ತ್ರೀಯರಿಗೂ, ಪುರುಷರಿಗೂ ಸಮಾನವಾಗಿದ್ದರೂ, ರಜೋದರ್ಶನ ಗರ್ಭಧಾರಣ, ಪ್ರಸವ ಮೊದಲಾದ ದೈಹಿಕ ವಿಕಾರಗಳು ಪುರುಷರಿಗಿಂತ ಸ್ತ್ರೀಯರಿಗೆ ಹೆಚ್ಚಿನವಾಗಿರುವವು; ಆದ್ದರಿಂದ ವಿಕಾರರಾಹಿತ್ಯದ ಕೊರತೆಯಿಂದಲೂ, ಸ್ತ್ರೀಯರು ಪುರುಷರಿಗೆ ಅಧೀನರಾಗಿರಬೇಕಾಗುವದು.

ಇನ್ನು ಜನೆಯ ಕಾರಣವಾದ ಧರ್ಮಪಾಲನದ ದೃಷ್ಟಿಯಿಂದ ವಿಚಾರಮಾಡೋಣ. ಈ ದೃಷ್ಟಿಯಿಂದ ಸ್ತ್ರೀಯರು ಪುರುಷರಿಗಿಂತಲೂ ಶ್ರೇಷ್ಠರೆಂದು ಒಡಂಬಡಬೇಕಾಗುತ್ತದೆ; ಯಾಕಂದರೆ, ಸ್ತ್ರೀಯರ ಕೋಮಲಾಂತಃಕರಣ, ದಯಾರ್ದ್ರ ಹೃದಯ, ಪ್ರೇಮಮಯ ಮನೋವೃತ್ತಿ, ಪರೋಪಕಾರನಿರತತೆ ಮೊದಲಾದ ಪವಿತ್ರ ಸುಕುಮಾರ ಗುಣಗಳ ಮೂಲಕ ಅವರಲ್ಲಿ ಭಾವಿಕತನವು ಹೆಚ್ಚಿ, ಧರ್ಮತತ್ವಗಳು ಅವರ ಹೃದಯದಲ್ಲಿ ನೆಲೆಗೊಳ್ಳುವವು; ಆದ್ದರಿಂದ ಪುರುಷರಿಗಿಂತ ಸ್ತ್ರೀಯರು ಧರ್ಮಲಂಡರಾಗುವದು ಕಡಿಮೆ. ಇಂಥ ಹೀನ ಕಾಲದಲ್ಲಿಯೂ, ಭರತಭೂಮಿಯಲ್ಲಿ ಧರ್ಮವು ದೊಡ್ಡ ಪ್ರಮಾಣದಿಂದ ಸ್ತ್ರೀಯರಿಂದಲೇ ಉಳಿದದ್ದಾಗಿರುತ್ತದೆ; ಆದರೆ ಅವರ ಈ ಪವಿತ್ರ ಧರ್ಮಪಾಲನವು, ಪುರುಷರ ಸಂರಕ್ಷಣವಿಲ್ಲದೆ ನಿರ್ವಿಘ್ನದಿಂದಾಗದು. ಉದಾಹರಣಕ್ಕಾಗಿ ಸ್ತ್ರೀಯರ ಶ್ರೇಷ್ಠಧರ್ಮವಾದ ಪಾತಿವ್ರತ್ಯ ಪಾಲನದ ದೃಷ್ಟಿಯಿಂದಲೇ ಕೆಳಗೆ ಸ್ವತಂತ್ರವಾಗಿ ಸ್ವಲ್ಪ ವಿಚಾರಮಾಡೋಣ.

ಈ ಜಗತ್ತಿನೊಳಗಿನ ವಸ್ತುಗಳೆಲ್ಲ ಭೋಕ್ತೃ–ಭೋಗ್ಯಗಳೆಂಬ ಎರಡು ಧರ್ಮಗಳಿಂದ ಕಟ್ಟಲ್ಪಟ್ಟಿರುವವು. ಭೋಕ್ತೃವೆಂದರೆ ಭೋಗಿಸುವ ವಸ್ತುವು. ಭೋಗ್ಯವೆಂದರೆ ಭೋಗಕ್ಕೆ ವಿಷಯವಾದ ವಸ್ತುವು. ಈ ದೃಷ್ಟಿಯಿಂದ ನೋಡಿದರೆ, ಜಗತ್ತಿನ ಪ್ರತಿಒಂದು ವಸ್ತುವು ಭೋಕ್ತೃವೂ ಆಗಿರುವದು, ಭೋಗ್ಯವೂ ಆಗಿರುವದು ಎಂಬಮಾತು ವಿಚಾರದಿಂದಗೊತ್ತಾಗಬಹುದು. ಉದಾಹರಣಾರ್ಥವಾಗಿ, ಕಾಳು–ಕಡಿ ಮೊದಲಾದ ಸಸ್ಯಪದಾರ್ಥಗಳನ್ನು ತಕ್ಕೊಳ್ಳೋಣ. ಅವು ಪ್ರಾಣಿಗಳ ಭೋಗ್ಯವಸ್ತುಗಳಷ್ಟೆ? ಆದರೆ

ಅವೇ ಪ್ರಾಣಿಗಳು ಸತ್ತು ಅವುಗಳ ದೇಹಗಳು ಕೊಳೆತು ಗೊಬ್ಬರವಾದರೆ, ರೂಪಾಂತರಹೊಂದಿದ ಆ ಪ್ರಾಣಿಗಳೇ ಸಸ್ಯಗಳ ಭೋಗ್ಯವಸ್ತುಗಳಾಗುವವು! ಅದರಂತೆ ಸ್ತ್ರೀಯರು ಪುರುಷರಿಗೆ ಭೋಗ್ಯರಾದರೆ, ಪುರುಷರು ಸ್ತ್ರೀಯರಿಗೆ ಭೋಗ್ಯರಾಗುವರು. "ಜೀವೋ ಜೀವಸ್ಯ ಜೀವನಂ" ಎಂಬ ಸಿದ್ಧಾಂತದಂತೆ, ಒಂದು ಪ್ರಾಣಿಯು ಮತ್ತೊಂದು ಪ್ರಾಣಿಯನ್ನು ತಿಂದೇ ಜೀವಿಸಬೇಕಾಗುವದು. ಹೀಗೆ ಪ್ರತಿ ಒಂದು ವಸ್ತುವು, ಭೋಕ್ತೃ-ಭೋಗ್ಯಗಳೆಂಬ ಎರಡೂ ಧರ್ಮಗಳುಳ್ಳದ್ದಾಗಿದ್ದರೂ, ವಿಕಾರವಶತೆಯು ಹೆಚ್ಚು ಇದ್ದ ಪ್ರಾಣಿಗಳಲ್ಲಿ ಭೋಗ್ಯಧರ್ಮವು ಹೆಚ್ಚು, ವಿಕಾರವಶತೆಯು ಕಡಿಮೆ ಇರುವ ಪ್ರಾಣಿಯಲ್ಲಿ ಭೋಕ್ತೃಧರ್ಮವು ಹೆಚ್ಚು ಇರುವವು. ಮೇಲೆಯಂತು ಪುರುಷರಿಗಿಂತ ಸ್ತ್ರೀಯರಲ್ಲಿ ವಿಕಾರವಶತೆಯು ಹೆಚ್ಚು ಎಂದು ಸಿದ್ಧವಾಗಿರುವದರಿಂದ, ಯಾರು ಭೋಗ್ಯರಾದಂತಾಯಿತು?

ಈ ಸೃಷ್ಟಿಯಲ್ಲಿ ಭೋಕ್ತೃಗಳ ಮನಸ್ಸು ತಮ್ಮ ಭೋಗ್ಯವಸ್ತುಗಳ ಕಡೆಗೆ ಧಾವಿಸಿ, ಅವನ್ನು ಆಕ್ರಮಿಸುವದು ಸ್ವಾಭಾವಿಕವು! ಅದರಂತೆ ಪುರುಷರಮನಸ್ಸು ಸ್ತ್ರೀಯರಕಡೆಗೆ ಹರಿದು, ಒಮ್ಮೊಮ್ಮೆ ಬಲಾತ್ಕಾರದ ಪ್ರಸಂಗವೂ ಒದಗುವದು! ಆದ್ದರಿಂದ ಹಗಲುರಾತ್ರಿಯೆನ್ನದೆ ಪುರುಷರು ಒಬ್ಬೊಂಟಿಗರಾಗಿ ಬೇಕಾದಲ್ಲಿ ಹೋಗುವಂತೆ, ಸ್ತ್ರೀಯರು ಹೋದರೆ ಅವರ ಪಾತಿವ್ರತ್ಯಧರ್ಮವು ಸುರಕ್ಷಿತವಾಗಿ ಉಳಿಯುವ ಸಂಭವವಿಲ್ಲ; ಆದ್ದರಿಂದಲೇ, ಸ್ತ್ರೀಯರು ಬಾಲ್ಯದಲ್ಲಿ ತಂದೆಯಿಂದಲೂ, ಪ್ರಾಯದಲ್ಲಿ ಗಂಡನಿಂದಲೂ, ವಾರ್ಧಕ್ಯದಲ್ಲಿ ಮಕ್ಕಳಿಂದಲೂ ಸಂರಕ್ಷಿಸಲ್ಪಡಬೇಕೆಂದು ಸ್ವತಃ ಸ್ತ್ರೀಯರ, ಹಾಗು ರಾಷ್ಟ್ರದ ಕಲ್ಯಾಣಕ್ಕಾಗಿ ಶ್ರುತಿ-ಸ್ಮೃತಿಗಳ ಅಪ್ಪಣೆಗನುಸರಿಸಿ ಜ್ಞಾನಿಗಳು ಹೇಳಿರುವರು. ಇಹ-ಪರ-ಸುಖ-ಸಾಧನವಾದ ಸ್ತ್ರೀಯರ ಧರ್ಮವನ್ನು ಪಾಲಿಸುವದಕ್ಕಾಗಿ, ಹೀಗೆ ಸುರಕ್ಷಿತತೆಯ ಪಾರತಂತ್ರ್ಯಕ್ಕೆ ಸ್ತ್ರೀಯರು ಒಳಗಾಗಿದ್ದರೂ, ಅವರ ಐಹಿಕಸುಖಕ್ಕೂ, ಪಾರಮಾರ್ಥಿಕ ಉನ್ನತಿಗೂ ಯಾವತರದ ಪ್ರತಿಬಂಧವೂ ಇಲ್ಲದೆ, ತಿರುಗಿ ಅವರಿಗೆ ಪುರುಷರಸಂರಕ್ಷಣದ ಸಹಾಯದ ಲಾಭವಾಗುತ್ತಿರುವದರಿಂದ, ನಮ್ಮ ಭರತಭೂಮಿಯಲ್ಲಿ ಸೀತಾ-ದ್ರೌಪದಿ-ಸಾವಿತ್ರಿ, ದಮಯಂತಿ ಮುಂತಾದ

ಅನಂತ ಸಾಧ್ವಿಯರು ಕುಲಭೂಷಣರಾಗಿ ಐಹಿಕ-ಪಾರಮಾರ್ಥಿಕ ಸುಖಗಳನ್ನು ಭೋಗಿಸುವ ಪಾತ್ರತೆಯನ್ನು ಪಡೆದು, ಕೆಲವರು ತಮ್ಮ ಪತಿಗಳನ್ನು ಕೂಡ ಉದ್ಧರಿಸಿ ಈಗಲೂ ಕೀರ್ತಿಶೇಷರಾಗಿ ಇರುವರು! ಇದರಮೇಲಿಂದ ನೋಡಿದರೆ, ಆರ್ಯಸ್ತ್ರೀಯರಿಗೆ ಈಗಿನ ರಕ್ತಶೋಷಕ ಪಾರತಂತ್ರ್ಯದಗಾಳಿ ಕೂಡ ಸೋಂಕಿರುವದಿಲ್ಲ; ಸೋಂಕುವ ಸಂಭವವೂ ಇಲ್ಲ. "ನಸ್ತ್ರೀಸ್ವಾತಂತ್ರ್ಯಮರ್ಹತಿ" ಎಂಬ ವಾಕ್ಯದ ಅರ್ಥವನ್ನು, "ಸ್ತ್ರೀಯು ಸುರಕ್ಷಿತೆಯಾಗದೆ ಸಿಕ್ಕಲ್ಲಿ ಸ್ವಚ್ಛಂದವಾಗಿ ಹೋಗಲು ತಕ್ಕವಳಲ್ಲವೆಂ"ದು ಮಾಡದೆ; ಅವರ ಆ ಸುರಕ್ಷಿತತೆಯನ್ನು ಈಗಿನ ಪ್ರಗತಿಘಾತಕವಾದ ದುಷ್ಟರ ರಕ್ತಶೋಷಕಪಾರತಂತ್ರ್ಯಕ್ಕೆ ಹೋಲಿಸಿ, ಘಾತಕವಾದ ಸ್ತ್ರಿಯರ ಉಚ್ಛೃಂಖಲವೃತ್ತಿಗೆ ಆಸ್ಪದಕೊಡುತ್ತಿರುವದು ಭರತಭೂಮಿಯ ದುರ್ದೈವದ, ಅಥವಾ ಸತ್ವನಾಶದ ಲಕ್ಷಣವಾಗಿರುವದು. ಸ್ತ್ರೀಯರೆಂದರೆ ಪೂಜ್ಯರಾದ ತಾಯಂದಿರೂ, ಗುರುಪತ್ನಿಯರೂ, ಸನ್ಮಾನನೀಯ ಭಗಿನಿಯರೂ, ಅಕ್ಕರೆಯಮಕ್ಕಳೂ, ಪ್ರೀತ್ಯಾಸ್ಪದರಾದ ಹೆಂಡಿರೂ ಆಗಿರುವರು. ಅಂಥವರನ್ನು ಪಾಪದಾಯಕವಾದ ಪ್ರಗತಿನಾಶಕ, ರಕ್ತಶೋಷಕ ಪಾರತಂತ್ರ್ಯಕ್ಕೆ ಗುರಿಮಾಡಿ, ಪುರುಷರು ಯಾವ ಇಹ-ಪರ ಸೌಖ್ಯವನ್ನು ಸುರಿದುಕೊಳ್ಳಬಹುದು? ಇಷ್ಟು ವಿವೇಕವೂ- ಶ್ರುತಿ- ಸ್ಮೃತಿಗಳಿಗೂ, ನಮ್ಮ ಪ್ರಾಚೀನ ಋಷಿಗಳಿಗೂ ಇರಲಿಕ್ಕಿಲ್ಲವೆ? ಹೀಗೆ ಸ್ತ್ರೀಯರು ಪುರುಷರಿಂದ ಸುರಕ್ಷಿತವಾಗಿರಬೇಕೆಂದು ಯತ್ನಿಸುವದೇ ಘಾತಕಪಾರತಂತ್ರ್ಯದ ಲಕ್ಷಣವಾಗಿದ್ದರೆ, ತಂದೆ-ತಾಯಿಗಳಿಂದ ಕೂಸುಗಳೂ, ಕುಟುಂಬದ ಯಜಮಾನನಿಂದ ಕುಟುಂಬವೂ, ಅರಸನಿಂದ ಪ್ರಜೆಗಳೂ, ಕ್ಷತ್ರಿಯರಿಂದ ಬ್ರಾಹ್ಮಣರೂ, ಬಹಳವೇಕೆ, ಲೋಕಸತ್ತೆಯಿಂದ ಲೋಕವೂ ಸುರಕ್ಷಿತವಾಗಿರಬೇಕೆಂದು ಯತ್ನಿಸುವದೂ ಕೂಡ ಘಾತಕಪಾರತಂತ್ರ್ಯವಾಗುವದಲ್ಲ! ಹೀಗಿದ್ದರೆ ಸ್ವೇಚ್ಛಾಚಾರವೊಂದು ಮಾತ್ರ ನಿಜವಾದ ಸ್ವಾತಂತ್ರ್ಯವೆಂದು ಹೇಳಿದ ಹಾಗಾಗುತ್ತದೆ! ಕಾಲಮಹಿಮೆಯ ಮುಂದೆ ಯಾರ ಆಟವೂ ನಡೆಯದೆಂಬ ಮಾತೇ ನಿಜವು.

# ೨ ಸ್ತ್ರೀಯರಲ್ಲಿ ವರ್ಗಗಳೆಷ್ಟು ?

ಸ್ತ್ರೀಯರು ಸ್ವತಂತ್ರರಾಗಿ ವ್ಯವಹರಿಸಲು ಯೋಗ್ಯರಲ್ಲವೆಂತಲೂ, ಅವರಿಗೆ ರಕ್ಷಕರು ಬಾಲ್ಯದಲ್ಲಿ ತಂದೆಯೂ, ಪ್ರಾಯದಲ್ಲಿ ಗಂಡನೂ, ವೃದ್ಧಾಪ್ಯದಲ್ಲಿ ಮಗನೂ ಇರಬೇಕಾಗುವದೆಂತಲೂ ಇದರ ಹಿಂದಿನ ಪ್ರಬಂಧದಲ್ಲಿ ಸಪ್ರಮಾಣವಾಗಿ ಹೇಳಿರುತ್ತದೆ. ಆದರೆ ಎಲ್ಲಸ್ತ್ರೀಯರೂ ಹೀಗೆ ಪುರುಷರನ್ನು ಅನುಸರಿಸಿ ನಡೆಯುತ್ತಾರೆಂಬ ನಿಯಮವಿಲ್ಲ; ಕೆಲವರು ಯಾರ ಹಂಗೂ ಇಲ್ಲದೆ ಸ್ವತಂತ್ರರಾಗಿ ನಡೆಯುವವರೂ ವ್ಯವಹಾರದಲ್ಲಿ ಕಂಡು ಬರುವದು. ಮನುಷ್ಯಪ್ರಾಣಿಯು ಗಂಡಸೇ ಇರಲಿ, ಹೆಂಗಸೇ ಇರಲಿ ಸ್ವಾತಂತ್ರ್ಯಪ್ರಿಯವಾಗಿರುವದರಿಂದ ಎರಡನೆಯವರಿಗೆ ಅಧೀನವಾಗಿ ನಡೆಯುವದಕ್ಕೆ ಮೆಚ್ಚುವದಿಲ್ಲ; ಆದರೆ ದೇಹದ ವಿಷಯದಲ್ಲಿ ನನ್ನದು ಎಂಬ ಅಭಿಮಾನವಿರುವವರೆಗೆ, ಅದರ ರಕ್ಷಣದವಿಷಯವಾಗಿ ಯಾವದೊಂದು ಕಾರಣದಿಂದ ಒಂದಿಲ್ಲೊಂದು ಬಗೆಯ ಪಾರತಂತ್ರ್ಯವನ್ನು ಒಪ್ಪಿಕೊಳ್ಳಲೇ ಬೇಕಾಗುವದು. ಈ ಪಾರತಂತ್ರ್ಯಗಳಲ್ಲಿ ಧರ್ಮಮೂಲಕ ಪಾರತಂತ್ರ್ಯವಹಿಸುವದು ಮನುಷ್ಯನಿಗೆ ಹಿತಕರವಾಗಿರುತ್ತದೆ. ಈ ಧರ್ಮಮೂಲವಾದ ಪಾರತಂತ್ರ್ಯವನ್ನು ಕೇವಲ ಹೆಂಗಸರೇ ಪಾಲಿಸಬೇಕಾಗುವದೆಂತಲ್ಲ, ಗಂಡಸೂ ಪಾಲಿಸಬೇಕಾಗುವದು. ಯಾಕಂದರೆ, ಧರ್ಮವು ಜಗತ್ತಿನ ಸುಖಶಾಂತಿಗಳಿಗೆ ಕಾರಣವಾಗಿರುವದು. ಧರ್ಮವೆಂದರೆ, ಜಗತ್ತಿನ ಕಲ್ಯಾಣಕ್ಕಾಗಿ ನಿಸ್ಪೃಹಿಗಳಾದ ಜ್ಞಾನಿಗಳು ಹಾಕಿಕೊಟ್ಟಿರುವ ವ್ಯವಹಾರದ ವಿಧಿನಿಷೇಧಗಳ ನಿಯಮಗಳ ಸಮುಚ್ಚಯವೆಂಬ ಮಾತನ್ನು ಯಾವಾಗಲೂ ಲಕ್ಷದಲ್ಲಿಡಬೇಕು.

ಒಟ್ಟಿಗೆ, ಧರ್ಮಕ್ಕೆ ಸಮ್ಮತವಾಗಿ ಪತಿಯೊಡನೆ ನಡೆಯುವ ಸ್ತ್ರೀಯರು ತಮ್ಮ ಹಾಗು ತಮ್ಮ ಪತಿಯ ಹಿತಗಳೆರಡನ್ನೂ ಸಾಧಿಸುವದರಿಂದ, ಅವರಿಗೆ ಪತಿರಕ್ಷಕ ಸ್ತ್ರೀಯರೆಂತಲೂ, ಹಾಗೆ ನಡೆಯದ ಸ್ತ್ರೀಯರಿಗೆ ಪತಿಭಕ್ಷಕ ಸ್ತ್ರೀಯರೆಂತಲೂ ಸಂಜ್ಞೆಕೊಡಬಹುದು. **ಪತಿರಕ್ಷಕ** ಸ್ತ್ರೀಯರಲ್ಲಿ ಅವರ ಧರ್ಮಪಾಲನದ ಮಾನದಿಂದ-

ಸಾಧ್ವಿಯರು, ಸುವಿಚಾರಿಗಳು ಎಂಬ ಎರಡುವರ್ಗಗಳಾಗುವವು. ಅದರಂತೆ ಪಕ್ಷಿಭಕ್ಷಕ ಸ್ತ್ರೀಯರಲ್ಲಿ ಅವರ ಧರ್ಮತ್ಯಾಗದ ಮಾನದಿಂದ, ಅವರಲ್ಲಿ—ಸುಖಲೋಲುಪರು, ಸಾಹಸಿಗಳು ಎಂಬ ಎರಡು ವರ್ಗಗಳಾಗುವವು. ಹೀಗೆ ಸ್ತ್ರೀಯರಲ್ಲಿ ಒಟ್ಟಿಗೆ, ಸಾಧ್ವಿಯರು ಅಥವಾ ಸತಿಯರು, ಸುವಿಚಾರಿಗಳು, ಸುಖಲೋಲುಪರು, ಸಾಹಸಿಗಳು ಎಂಬ ನಾಲ್ಕುವರ್ಗಗಳಾಗುವವು. ಇವರ ಲಕ್ಷಣಗಳನ್ನು ಆದಷ್ಟು ವಿಶದವಾಗಿ ಹೇಳುವೆವು.

**ಸಾಧ್ವಿಯರ ಲಕ್ಷಣಗಳು**—ಈ ಲೋಕಪೂಜ್ಯರ ಸಂಪೂರ್ಣ ಲಕ್ಷಣಗಳನ್ನು ವರ್ಣಿಸುವದು ಈಗ ಶಕ್ಯವಲ್ಲದಿದ್ದರೂ, ಅವರ ಕೆಲವು ಲಕ್ಷಣಗಳನ್ನಾದರೂ ಇಲ್ಲಿ ಹೇಳಲು ಯತ್ನಿಸುತ್ತೇವೆ,

**೧ನೆಯ ಲಕ್ಷಣ**—ತಮ್ಮ ಪತಿಯನ್ನು ದೇವರೆಂದು ತಿಳಿಯುವದು ಸಾಧ್ವೀತ್ವದ ಮೊದಲನೆಯ ಲಕ್ಷಣವಾಗಿರುತ್ತದೆ. ದೇವಭಕ್ತರಿಗೆ ತಮ್ಮ ದೇವರಿಗಿಂತ ಹೆಚ್ಚಿನದಿಲ್ಲದಿರುವಂತೆ, ಸಾಧ್ವಿಯರಿಗೆ ತಮ್ಮ ಪತಿಗಿಂತ ಹೆಚ್ಚಿನದು ಈ ಲೋಕದಲ್ಲಾಗಲಿ, ಪರಲೋಕದಲ್ಲಾಗಲಿ ಯಾವದೂ ಕಾಣುವದಿಲ್ಲ! ತಮ್ಮ ಪತಿಯು ಸುಂದರನೂ, ಸುಗುಣಪೂರ್ಣನೂ, ಸಮರ್ಥನೂ ಇರಲಿ, ಅಥವಾ ಕುರೂಪಿಯೂ, ದುರ್ಗುಣಿಯೂ, ಮಹಾ ರೋಗಿಯೂ ಇರಲಿ, ಸಾಧ್ವಿಯರು ಇದನ್ನಾವದನ್ನೂ ಎಣಿಸದೆ, ಭಾವಿಕರಾದ ದೇವಭಕ್ತರು, ತಮ್ಮ ಉಪಾಸ್ಯ ದೈವತದ ಮೂರ್ತಿಯು ಸುಂದರವಿರಲಿ, ಅಥವಾ ಅದು ಅಂಕಡೊಂಕ ಕಲ್ಲು ಆಗಿರಲಿ ಅವೆರಡನ್ನೂ ಏಕನಿಷ್ಠೆಯಿಂದ ಪೂಜಿಸುತ್ತಿರುವಂತೆ, ಆ ಸಾಧ್ವಿಯರೂ ತಮ್ಮ ಪತಿಯನ್ನು ಆತನ ಆ ಗುಣದೋಷಗಳನ್ನೆಣಿಸದೆ, ಏಕನಿಷ್ಠೆಯಿಂದ ಪೂಜಿಸುವರು! ದೇವಭಕ್ತರು ತಾವು ಪೂಜಿಸುತ್ತಿರುವ ಕಲ್ಲಮೂರ್ತಿಯನ್ನು ಕಲ್ಲು ಎಂದು ನೋಡದೆ ದೇವರೆಂದು ಭಾವಿಸುವದರಿಂದ, ಕಲ್ಲಿನ ಗುಣದೋಷಗಳೆರಡೂ ಅವರಿಗೆ ಕಾಣದಂತಾಗಿ, ದೇವರ ಷಡ್ಗುಣೈಶ್ವರ್ಯಸಂಪನ್ನತೆಯು ಮಾತ್ರ ಅವರ ಕಣ್ಣಿಗೆ ಕಟ್ಟುವದು. ಅದರಂತೆ, ಸಾಧ್ವಿಯರು ತಮ್ಮ ಪತಿಯನ್ನು ಗುಣದೋಷಯುಕ್ತನಾದ ಮನುಷ್ಯನೆಂದು ನೋಡದೆ, ಷಡ್ಗುಣೈಶ್ವರ್ಯ ಸಂಪನ್ನನಾದ ಪರಮಾತ್ಮನೆಂದು ಭಾವಿಸುವದರಿಂದ, ಅವರಿಗೆ ಪತಿಯ ಗುಣದೋಷಗಳೆರಡೂ ಮರೆಯಾಗಿ

ಪರಮಾತ್ಮನ ಪರಮಾತ್ಮತ್ವವು ಮಾತ್ರ ಅವರ ಕಣ್ಣಿಗೆ ಕಟ್ಟುವದು! ಇಂತಹ ಗುಣದೋಷ ದೃಷ್ಟಿಯಿಲ್ಲದ ದ್ವೈವೀಭಾವದ ಉಪಾಸನೆಯೇ ಉದಾತ್ತತರ ಉಪಾಸನೆಯಾಗಿರುವದು; ಯಾಕಂದರೆ, ಇಂತಹ ಉಪಾಸಕರು ತಮ್ಮ ಉಪಾಸನೆಯನ್ನು ತಮ್ಮ ಕರ್ತವ್ಯವೆಂದು ಮಾಡುವರಲ್ಲದೆ, ಸ್ವಹಿತದ ಯಾವ ಹೇತುವಿನಿಂದಲೂ ಮಾಡುವದಿಲ್ಲ!

**೨ನೆಯ ಲಕ್ಷಣ**—ಪತಿಯ ಸಂತೋಷವೇ ಸಾಧ್ವಿಯರ ಸಂತೋಷವಾಗಿರುವದು ಸಾಧ್ವಿಯರ ಸಾಧ್ವೀತ್ವದ ಎರಡನೆಯ ಲಕ್ಷಣವಾಗಿರುತ್ತದೆ! ಇವರು ತಮಗೆ ಸೇವ್ಯನಾಗಿರುವ ಪತಿಗೆ ಸಂತೋಷವಾಗುವಂತೆ ತಾವು ನಡೆದುಕೊಳ್ಳುವದೇ ಪತಿಸೇವೆಯೆಂದು ತಿಳಿಯುವರು; ಆದ್ದರಿಂದ ಇವರು ತಮ್ಮ ವಸ್ತ್ರಾಭರಣಗಳ ವಿಷಯದಲ್ಲಿ, ಅಥವಾ ಸಂಸಾರೋಪಯುಕ್ತ ವಸ್ತುಗಳ ತರಬರುವ ವಿಷಯದಲ್ಲಿ ಎಷ್ಟು ಮಾತ್ರವೂ ಪತಿಗೆ ತೊಂದರೆಕೊಡುವದಿಲ್ಲ. ಮನೆಯಲ್ಲಿಲ್ಲದ ಪದಾರ್ಥಗಳನ್ನು ತರಬೇಕೆಂದು ತಟ್ಟನೆ ಪತಿಯ ಮೋರೆಯ ಮುಂದೆ ಹೇಳುವದು ಉದ್ಧತತನವೆಂದು ತಿಳಿದು ಮಕ್ಕಳ ಮುಖಾಂತರವಾಗಿಯಾಗಲಿ, ಅಥವಾ ಬೇರೆ ಯಾವದೊಂದು ರೀತಿಯಿಂದಾಗಲಿ ಅವರು ಶಕ್ಯಾಶಕ್ಯತೆಯರಿತು, ಸಮಯನೋಡಿ ಮನೆತನದ ಅನಿರ್ವಾಹ ಪಕ್ಷದ ಕೊರತೆಯು ಮಾತ್ರ ಪತಿಯ ಕಿವಿಗೆ ಮುಟ್ಟುವಂತೆ ಮಾಡುವರು. ಹೀಗೆಯೇ ಆಗಬೇಕೆಂದು ಇವರು ಯಾವ ವಿಷಯದಲ್ಲಿಯೂ ಆಗ್ರಹ ತಾಳುವದಿಲ್ಲ. ಪತಿಗೆ ನಿವೇದಿಸದೆ ಇವರು ಏನನ್ನೂ ಗ್ರಹಿಸುವದಿಲ್ಲ. ಪತಿಯ ಉಚ್ಛಿಷ್ಟವನ್ನೂ, ಪತಿಭುಕ್ತಶೇಷವನ್ನೂ ಭಕ್ತಿಯಿಂದ ಸೇವಿಸುವದೂ, ಪತಿಗೆ ಯಾವ ಬಗೆಯಿಂದಲೂ ತೊಂದರೆ ಕೊಡದಿರುವದೂ, ತಮಗಾಗುವ ಕಷ್ಟ-ನಷ್ಟಗಳನ್ನು ಸಹಿಸುವದೂ, ಸದಾ ಸಂತೋಷವೃತ್ತಿಯಲ್ಲಿರುವದೂ ಇವರ ಪವಿತ್ರ ವ್ರತಗಳಾಗಿರುವವು! ಇವರು ಪತಿಯ ಸಂತೋಷಕ್ಕಾಗಿ ಪತಿಯ ಆಪ್ತೇಷ್ಟರೊಡನೆ ಭಕ್ತಿ-ವಿಶ್ವಾಸದಿಂದಲೂ, ಪತಿಯ ವಿರೋಧಿಗಳೊಡನೆ ವಿರೋಧದಿಂದಲ್ಲ, ಉದಾಸೀನಭಾವದಿಂದಲೂ ನಡೆದುಕೊಳ್ಳುವರು. ಪ್ರತ್ಯಕ್ಷ ಪತಿಯಲ್ಲಿ ಭಕ್ತಿ ವಿಶ್ವಾಸ ತಾಳುವದಕ್ಕಿಂತ, ಪತಿಯ ಅಲ್ಪ ಸ್ವಲ್ಪ ಸಂಬಂಧವುಳ್ಳವರಲ್ಲಿ ಕೂಡ ವಿಶ್ವಾಸತಾಳುವದು ಪತಿಗೆ ಹೆಚ್ಚು ಸಂತೋಷಕರ

ವೆಂಬ ಗಂಭೀರ ವಿಚಾರವು ಇವರ ವೈ ಉಂಡು ಹೋಗಿರುವದು. ಏಕ ದೇವತಾ ಪೂಜೆಗಿಂತ ಸಪರಿವಾರದ ಪಂಚಾಯತನ-ದೇವತಾಪೂಜೆಯು ಭಕ್ತರ ಮಾತ್ಸರ್ಯಾದಿ ವಿಕಾರನಾಶಕ್ಕೆ, ಅರ್ಥಾತ್ ಸಮತಾದೃಷ್ಟಿಯ ಉತ್ಪತ್ತಿಗೆ ಹೆಚ್ಚು ಸಹಾಯಕಾರಕವಾಗಿರುವದೆಂಬ, ಉಪಾಸನೆಯ ಉದಾತ್ತ ತತ್ವವು ಸಾಧ್ವಿಯರ ಬಳಿಕೆಯಲ್ಲಿ ಬಂದು ಹೋಗಿರಮದು; ಮತ್ತು ಅನ್ಯರ ನಿಂದಾಸ್ತುತಿಗಳಿಂದ ತಮ್ಮ ಸಾಧ್ವೀತ್ವಕ್ಕೆ ಹಾನಿಯುಂಟಾಗುವದೆಂಬ ಮಾತು ಇವರಿಗೆ ಗೊತ್ತಿರುವದರಿಂದ, ಇವರು ಒಬ್ಬರನ್ನು ನಿಂದಿಸುವದೂ ಇಲ್ಲ, ಸ್ತುತಿಸುವದೂ ಇಲ್ಲ! ಸಾಧ್ವಿಯರ ಈ ಉದಾತ್ತವಾದ ಆಚರಣೆಯಿಂದ ಅವರ ಮನೆಯು ಸುಖಶಾಂತಿಗಳ ಉತ್ಪತ್ತಿ ಸ್ಥಾನವು, ಅರ್ಥಾತ್ ದೇವತಾ ವಾಸವು ಆಗುವುದು! "ಯತ್ರನಾರ್ಯಸ್ತುಪೂಜ್ಯಂತೇ ರಮಂತೇ ತತ್ರದೇವತಾಃ" ಎಂಬ ಮನೂಕ್ತಿಯು ಈ ಸಾಧ್ವಿಯರ ಮನೆಗೇ ಹತ್ತುವದು. ಇಲ್ಲಿ "ಸುಪೂಜ್ಯಂತೇ" ಇದರ ಅರ್ಥವು "ಸುಶೀಲಾವರ್ತಂತೇ" ಎಂದು ಇರುವದು.

**೩ನೆಯ ಲಕ್ಷಣ—ಪತಿಯ ವಾಕ್ಯವು ಮಂತ್ರಮೂಲವಾಗಿಯೂ, ಪತಿಯರೂಪವು ಧ್ಯಾನ ಮೂಲವಾಗಿಯೂ, ಪತಿಯ ಕೃಪೆಯು ಮೋಕ್ಷಮೂಲವಾಗಿಯೂ ತೋರುತ್ತಿರುವದು** ಸಾಧ್ವಿಯರ ಮೂರನೆಯ ಲಕ್ಷಣವಾಗಿರುತ್ತದೆ. ಈಲಕ್ಷಣದ ಮೂಲಕ ಸಾಧ್ವಿಯರು, ತಮ್ಮ ಎಲ್ಲ ವ್ರತಗಳೂ, ಎಲ್ಲ ಉಪೋಷಣಗಳೂ, ಎಲ್ಲತೀರ್ಥಯಾತ್ರೆಗಳೂ ಪತಿಸೇವೆಯಲ್ಲಿಯೇ ಬರುವವೆಂದು ತಿಳಿಯುವರು. ಪತಿಯ ಅಪ್ಪಣೆಯ ಹೊರತು ಇವರು ಯಾವಧರ್ಮಕಾರ್ಯಗಳನ್ನೂ ಮಾಡುವದಿಲ್ಲ; ಮತ್ತು ಪತಿಯಮುಂದೆ ಇವರು ತಮ್ಮ ಸತ್ಕರ್ಮ-ಸದಾಚಾರ- ಸದ್ಗುಣಗಳ ಆಡಂಬರವನ್ನು ಸರ್ವಥಾ ತೋರಿಸುವದಿಲ್ಲ. ಗೃಹಕೃತ್ಯಗಳಲ್ಲಿ ಸಮಾಮಗ್ನರಾಗಿರುವಾಗ, ಅತಿಥ್ಯಭ್ಯಾಗತರನ್ನು ಸತ್ಕರಿಸುವಾಗ, ದೇವಪಿತೃಕಾರ್ಯಗಳಲ್ಲಿ ಭಕ್ತಿಯಿಂದ ಪತಿಯನ್ನು ಸಹಚರಿಸುವಾಗ ಇವರು ಮಾಡಬೇಕಾದ ಇಂದ್ರಿಯನಿಗ್ರಹವು ಇವರ ಸಹಜವಾದ ತಪಶ್ಚರ್ಯವಾಗಿರುದು. ಈ ತಪಶ್ಚರ್ಯಕ್ಕೆ ತಮ್ಮ ಪತಿಯು ಸಪರಿವಾರ ಸಂತೋಷದಲ್ಲಿರುವದೇ ಉಚ್ಚತರ ಫಲವೆಂದು ಇವರು ಭಾವಿಸುವರು!

**೪ನೆಯ ಲಕ್ಷಣ— ಪತಿಯ ದೋಷಗಳೂ ಗುಣಗಳಾಗಿ ತೋರುವಷ್ಟು ಸಾಧ್ವಿಯರ ಮನಸ್ಸು ಪವಿತ್ರವಾಗಿ, ಅಂದರೆ ವಿಕಾರರಹಿತವಾಗಿ ಇರುವದು,** ಅವರ ಸಾಧ್ವೀತ್ವದನಾಲ್ಕನೆಯ ಲಕ್ಷಣವಾಗಿರುತ್ತದೆ. ಅನ್ಯರ ದೋಷಗಳನ್ನೂ ಗುಣಗಳಾಗಿಯೇ ಭಾವಿಸುವವರನ್ನು ಶ್ರೇಷ್ಠರೆಂದು ಭಗವತೀದಾಕ್ಷಾಯಣಿಯು, ತನ್ನ ತಂದೆಯಾದ ದಕ್ಷನಮುಂದೆ ಹೇಳಿದ್ದನ್ನು ಶ್ರೀಮದ್ಭಾಗವತದ ದಕ್ಷಯಜ್ಞಧ್ವಂಸದ ಪ್ರಸಂಗದಲ್ಲಿ ನೋಡಬಹುದು. ಸಾಧ್ವಿಯರು ತಾವು ತ್ರಿಕರಣಪೂರ್ವಕ ಪರಿಶುದ್ಧರಾಗಿರುವ ವಿಷಯದಲ್ಲಿ ಅತ್ಯಂತ ದಕ್ಷರಾಗಿರುವರು. ಅದಕ್ಕಾಗಿ ಇವರು ಪರಪುರುಷರ ಸ್ಪರ್ಶಮಾಡುವದಂತು ಇರಲಿ, ಅವರೊಡನೆ ಸಂಭಾಷಣವನ್ನೂ ಮಾಡುವದಿಲ್ಲ, ಅವರನ್ನು ಕಣ್ಣೆತ್ತಿ ನೋಡುವದೂ ಇಲ್ಲ. ತಮ್ಮ ಮನೆಬಿಟ್ಟು ಎರಡನೆಯವರ ಮನೆಗೆ ಹೋಗುವದೆಂದರೆ, ಇವರಿಗೆ ಕೃಷ್ಣಸರ್ಪದ ಹೆಡೆಯಮೇಲೆ ಕಾಲಿಟ್ಟಹಾಗೆ ಆಗುತ್ತದೆ. ಇವರು ಒಂಟಿಗರಾಗಿ ಸರ್ವಥಾ ಮನೆಬಿಟ್ಟು ಹೊರಬೀಳುವದಿಲ್ಲ. ಈ ಸುಜನರು ಗಟ್ಟಿಯಾಗಿ ಮಾತಾಡುವದಿಲ್ಲ; ಗಟ್ಟಿಯಾಗಿ ನಗುವದಿಲ್ಲ; ಕೆಟ್ಟ ಮಾತು ಆಡುವದಿಲ್ಲ; ಕೆಟ್ಟವಿಚಾರಮಾಡುವದಿಲ್ಲ ಪತಿಯು ಊರಲ್ಲಿ ಇಲ್ಲದಾಗ ಇವರು ಎರೆಕೊಳ್ಳುವದಿಲ್ಲ, ವಸ್ತ್ರಾಲಂಕಾರಗಳಿಂದ ಅಲಂಕೃತರಾಗುವದಿಲ್ಲ ಆಗ ಸದಾಪತಿಧ್ಯಾನತತ್ಪರರಾಗಿರುವದು ಇವರಿಗೆ ಇಷ್ಟವಾಗಿರುತ್ತದೆ. ಈಮಾತಿಗೆ ಜಾನಕಿಯ ರಾವಣಗೃಹವಾಸದ ಸ್ಥಿತಿಯೇ ಸಾಕ್ಷಿಯಾಗಿದೆ.

**೫ನೆಯ ಲಕ್ಷಣ— ಸಾಧ್ವಿಯರು ತಮ್ಮ ಬುದ್ಧಿವೈಭವ, ಜ್ಞಾನವೈಭವ, ಧನವೈಭವ, ಅಧಿಕಾರವೈಭವ** ಮೊದಲಾದವನ್ನು ತಮ್ಮ ಪತಿಯಚರಣಕ್ಕೆ ನಿವಾಳಿ ತೆಗೆದು ಚಲ್ಲಿಕೊಟ್ಟು, ನಿಸ್ಪೃಹತೆಯಿಂದ ಪತಿದೈವತದ ಭೋಳೇ ಭಾವಿಕ ಭಕ್ತರಾಗಿರುವದು ಸಾಧ್ವಿಯರ ಐದನೆಯ ಲಕ್ಷಣವಾಗಿರುತ್ತದೆ. ಈ ಲಕ್ಷಣದಮೂಲಕ ಇವರು ಯಾವಕಾರಣದಿಂದಲೇ ಆಗಲಿ, ಪತಿಯನ್ನು ಅತಿಕ್ರಮಿಸುವದು, ಅಥವಾ ಆತನ ತೇಜೋಭಂಗ ಮಾಡುವದು ತಮ್ಮ ಅಧಃಪತನ ಹೇತುವಾದ ಪತಿದ್ರೋಹವೆಂದು ಇವರು ತಿಳಿಯುವರು; ಆದ್ದರಿಂದ ಸಾಧ್ವಿಯರು ಪತಿದೈವತದ ಮುಂದೆ ಸ್ವಾರ್ಥದೃಷ್ಟಿಯಿಂದ ಕಣ್ಣಿದ್ದು ಕುರುಡರು, ಕಿವಿಯಿದ್ದು ಕಿವುಡರು,

ಬಾಯಿಯಿದ್ದು ಮೂಕರು, ಬುದ್ಧಿಯಿದ್ದು ಬದ್ಧಿಗೇಡಿಗಳು, ಜ್ಞಾನವಿದ್ದು ಅಜ್ಞಾನಿಗಳು ಆಗಿರುವದು ಪರಮಾಶ್ಚರ್ಯವೇಸರಿ! ಆದರೆ ಪತಿಯ ಆಜ್ಞೆಯೆಂದು, ಅಥವಾ ಪತಿಯ ಹಿತಕ್ಕಾಗಿ ತಮ್ಮ ಪ್ರಾಣವನ್ನಾದರೂ ಇವರು ಅರ್ಪಿಸಲಿಕ್ಕೆ ಹಿಂದೆ ಮುಂದೆ ನೋಡರು!

**೬ನೆಯ ಲಕ್ಷಣ— ಪತಿಯು ವಿಶ್ವಾಸದ ಸರ್ವಬಳಗವಾಗಿರುವದು** ಸಾಧ್ವಿಯರ ಸಾಧ್ವೀತ್ವದ ಆರನೆಯ ಲಕ್ಷಣವಾಗಿರುತ್ತದೆ. ಯಾವತ್ತು ಕಾರ್ಯಕಲಾಪಗಳಲ್ಲಿ ಆತನು ಕೇಳಿದರೆ, ಆತನ ಮನಸ್ಸು ನೋಯದಂತೆ ವಿನಯದ ಮೃದು ಮಧುರವಚನಗಳಿಂದ ತಮಗೆ ತಿಳಿದ ಮಟ್ಟಿಗೆ ಆತನಿಗೆ ಹಿತದ ಆಲೋಚನೆ ಹೇಳುವ ವಿಷಯದಲ್ಲಿ ಇವರು ಶ್ರೇಷ್ಠಮಂತ್ರಿಗಳಾಗಿರುವರು; ಮತ್ತು ಪತಿಯ ಸೇವೆಮಾಡುವ ವಿಷಯದಲ್ಲಿ ನಯ-ಭಯ-ಭಕ್ತಿಗಳುಳ್ಳ, ಹಾಗು ದೇಹಶ್ರಮವನ್ನು, ಮನಸ್ಸಿನ ಬೇಸರವನ್ನು ಎಣಿಸದೆ ಕೈಮುಟ್ಟಿ ಸೇವೆಮಾಡುವ ಪ್ರೇಮಲ ದಾಸಿಯರಾಗಿರುವರು; ಅದರಂತೆ ಪತಿಗೆ ಉತ್ಸುಕತೆಯಿಂದ ಉಣಿಸು ತಿನಸುಗಳನ್ನೊದಗಿಸಿಕೊಡುವ ವಿಷಯದಲ್ಲಿ ಅವರು ತಮ್ಮನ್ನೇ ಮರೆತು ಬಿಡುವ ವಾತ್ಸಲ್ಯದ ತಾಯಂದಿರಾಗಿರುವರು; ಹಾಗು ಅವರು ವಿಲಾಸ ನಿಪುಣೆ ರಂಭೆಯಂತೆ ಪತಿಗೆ ಭೋಗಪ್ರದರೂ, ಕೇವಲ ಧರ್ಮದೇವತೆಯಂತೆ ಪತಿಯ ಧರ್ಮಕಾರ್ಯಾನುಕೂಲಿಗಳೂ, ಸರ್ವಸಹೆಯೆನಿಸುವ ಭೂದೇವಿಯಂತೆ ಅನ್ಯರ ಅಪರಾಧಗಳನ್ನು ಕ್ಷಮಿಸುವವರೂ ಆಗಿರುವರು!

**೭ನೆಯ ಲಕ್ಷಣ -- ಸ್ವತಃ ವಿಷಯವಿರಾಗಿಗಳಾಗಿದ್ದು, ಪತಿಯ ಸಲುವಾಗಿ ವಿಷಯರಾಗಿಗಳಾಗಿರುವದು** ಇವರ ಸಾಧ್ವೀತ್ವದ ಏಳನೆಯ ಲಕ್ಷಣವಾಗಿರುತ್ತದೆ. ಇವರ ಯಾವ ಕೃತಿಗಳೇ ಆಗಲಿ, ಯಾವ ಭೋಗಗಳೇ ಆಗಲಿ ಪತಿಯ ಸಂತೋಷಕ್ಕಾಗಿಯೇ ಇರುವವು. ಒಟ್ಟಿಗೆ, ಸಾಧ್ವಿಯರು ಪತಿಯ ಸಲುವಾಗಿ ಸರ್ವಧರ್ಮಪರಿತ್ಯಾಗಿಗಳೂ, ಪತ್ಯೇಕ ಶರಣರೂ ಆದ ಮಹಾನಿಷ್ಕಾಮ ತಪಸ್ವಿನಿಯರಾಗಿರುವರೆಂದು ತಿಳಿಯತಕ್ಕದ್ದು. ಈ ಪತಿಪ್ರಾಣರ ಪ್ರಾರಬ್ಧವಶಾತ್ ಅವರ ಪತಿಯು ಮರಣ ಹೊಂದಿದರೆ, ಅವರು ತಮ್ಮ ಸಾಧ್ವೀತ್ವದ ಯೋಗ್ಯತೆಯಿದ್ದಂತೆ, ಸಹಜ ದೇಹತ್ಯಾಗಿಗಳು, ಅಥವಾ ಸಹಗಮನಿಗಳು, ಅಥವಾ ಕಠಿಣತರ ವ್ರತಾವಲಂಬಿಗಳು ಆಗುವರು.

ಇಂತಹ ಸುಲಕ್ಷಣ ಸಂಪನ್ನ ಸಾಧ್ವಿಯರ ಉದಯವು, ಸ್ವತಃ ಆ ಸಾಧ್ವಿಯರ, ಹಾಗು ಆಸಾಧ್ವೀ ಪತಿಯ, ಹಾಗು ಆ ಸಾಧ್ವೀಕು ಟುಂಬದ, ಹಾಗು ಆ ಸಾಧ್ವೀ ಸಮಾಜದ, ಹಾಗು ಆ ಸಾಧ್ವಿಯ ದೇಶದ ಮಹದ್ಭಾಗ್ಯವೆಂದು ತಿಳಿಯಬೇಕು. ನಮ್ಮ ಭರತಭೂಮಿಯಲ್ಲಿ ಅನಾದಿಕಾಲದಿಂದ ಇಂಥ ಮಹಾ ಮಹಾ ಸಾಧ್ವಿಯರು ಉದಯವಾಗುತ್ತ ಬಂದಿರುವದರಿಂದಲೇ, ಅದು ಪವಿತ್ರತರವಾದ ಪುಣ್ಯಭೂಮಿಯೆನಿಸಿರುವದು! ಈ ಸಾಧ್ವಿಯರ ಪ್ರಭಾವವು ಸಾಮಾನ್ಯವಾದದ್ದಲ್ಲ, ಅವರ ಅಲೌಕಿಕ ಪ್ರಭಾವವನ್ನು ತ್ರಿಮೂರ್ತಿಗಳೂ ಅಭಿನಂದಿಸುವರು; ಅವರ ಆ ಪ್ರಭಾವದ ಮಾನ್ಯತೆಗಾಗಿ, ಅಥವಾ ಅಂಜಿಕೆಗಾಗಿ ಸೂರ್ಯನು ಮಂದವಾಗಿ ತಪಿಸುವನು; ಅಗ್ನಿಯು ತನ್ನ ದಾಹಕ ಶಕ್ತಿಯನ್ನು ಕುಗ್ಗಿಸುವನು; ವಾಯುವು ಮೆಲ್ಲನೆ ಸುಳಿಯುವನು; ಭೂದೇವಿಯು ಮೃದುಸ್ಪರ್ಶಳಾಗುವಳು! ಸಾಧ್ವಿಯರ ಪವಿತ್ರ ನಾಮಸ್ಮರಣವು ಪಾಪನಾಶಕವಾಗಿರುವದರಿಂದಲೇ ಅಹಲ್ಯಾ, ದ್ರೌಪದೀ, ಸೀತಾ, ತಾರಾ ಮಂಡೋದರಿ ದಮಯಂತಿ ಮುಂತಾದವರು ಪ್ರಾತಃಸ್ಮರಣೀಯರಾಗಿರುವರು. ಇವರ ಪವಿತ್ರಾಚರಣೆಯ ಯೋಗ್ಯತೆಯೂ, ಇವರಿಗೆ ಪ್ರಾಪ್ತವಾಗುವ ಶ್ರೇಷ್ಠಫಲದ ಸ್ವರೂಪವೂ, ಇವರಿಂದಾಗುವ ಲೋಕಕಲ್ಯಾಣವೂ ಕ್ಷುದ್ರ ವಿಷಯಸುಖಾಸಕ್ತರಾದ ಸ್ವೇಚ್ಛಾಚರಣೆಯ ಸಾಹಸೀ ಸ್ತ್ರೀಯರಿಗೆ ಸರ್ವಥಾ ತಿಳಿಯದು. ತಮ್ಮ ಪತಿಯನ್ನು ಷಡ್ಗುಣೈಶ್ವರ್ಯ ಸಂಪನ್ನನಾದ ಪರಮೇಶ್ವರನೆಂದು ತಿಳಿದು ಆತನ ನಿಷ್ಕಾಮ ಉಪಾಸನೆ ಮಾಡುವದರಿಂದ, ಅವರಿಗೆ ಫಲಕೊಡಲು ಸರ್ವಸಾಕ್ಷಿಯಾದ ಪರಮೇಶ್ವರನೇ ಹೊಣೆಯಾಗಿರುವನು; ಯಾಕಂದರೆ ಉಪಾಸಕರು ಸ್ವತಃ ಪರಮೇಶ್ವರನ ಉಪಾಸನೆ ಮಾಡುವದಕ್ಕಿಂತ, ಪರಮೇಶ್ವರನ ಸೃಷ್ಟಿಯಲ್ಲಿಯ ಕ್ಷುದ್ರಗಳಲ್ಲಿ ಕ್ಷುದ್ರಗಳಾದ ಪ್ರಾಣಿಗಳು, ಅಥವಾ ವಸ್ತುಗಳು ಆತನ ಸಂಬಂಧಿಗಳೆಂದು, ಅಥವಾ ಆತನ ಸ್ವರೂಪಗಳೆಂದು ತಿಳಿದು ಅವುಗಳಲ್ಲಿಯ ಆತನ ಅಂತರ್ಗತತೆಯನ್ನು ಅರಿತು, ಭೂತದಯಾ-ಪಶ್ಚಾತ್ತಾಪ ಪ್ರೇರಿತರಾಗಿ ಅವುಗಳ ಉಪಾಸನೆ ಮಾಡುವವರಿಗೆ ಆತನು ಬೇಗನೆ ಕೈವಶವಾಗುವನು! ಪೂರ್ಣಕಾಮನಾದ ಆ ಭಗವಂತನಿಗೆ ತನ್ನ ಭಕ್ತರ ಈ

ಸರ್ವತ್ರ ದಾಸಭಾವದ ಉಪಾಸನೆಯ ವೈಭವವನ್ನು ನೋಡಿ ನಲಿಯುವದ ಕ್ಕಿಂತ ಹೆಚ್ಚಿನದೇನು ಬೇಕಾಗಿರಬಹುದು? ಈ ಸಾಧ್ವೀ ವರ್ಗದಲ್ಲಿ, ದಮಯಂತಿ, ಸೀತೆ, ಅರುಂಧತಿ, ಅನಸೂಯೆ, ಲೋಪಾಮುದ್ರೆ ಮುಂತಾದವರು ಬರುವರು.

**ಸುವಿಚಾರಿಗಳು**—ಇವರು ಸಾಧ್ವಿಯರಂತೆ ತಮ್ಮ ಪತಿಯನ್ನು ಪರಮೇಶ್ವರ ಸ್ವರೂಪನೆಂದು ತಿಳಿಯದಿದ್ದರೂ, ತಮ್ಮ ಪತಿಯು ತಮ್ಮ ಪಾತಿವ್ರತ್ಯಧರ್ಮಾಚರಣೆಯ ಆಧಾರವೆಂದು ತಿಳಿಯುವರು! ಪರಮೇಶ್ವರ ನಿಗಿಂತ ಪರಮೇಶ್ವರಪ್ರಣೀತ ಧರ್ಮವು ಕಡಮೆ ಯೋಗ್ಯತೆಯದಾದ್ದ ರಿಂದ, ಸುವಿಚಾರಿಗಳ ಯೋಗ್ಯತೆಯಾದಗೂ ಸಾಧ್ವಿಯರ ಯೋಗ್ಯತೆ ಗಿಂತ ಕಡಮೆಯಾಗಿರುವದು; ಆದರೂ ಸುವಿಚಾರಿಗಳ ಗಣನೆಯು ಸಾಧ್ವಿಯರಲ್ಲಿಯೇ ಆಗುತ್ತದೆ; ಯಾಕಂದರೆ, ಸಾಧ್ವಿಯರು ಪತಿಯ ಸಂತೋಷಕ್ಕಾಗಿ ಸರ್ವಸಂಗ ಪರಿತ್ಯಾಗಿಗಳಾಗಿರುವಂತೆ, ಸುವಿಚಾರಿಗಳು ತಮ್ಮ ಪಾತಿವ್ರತ್ಯ ಧರ್ಮಾಚರಣೆಗಾಗಿ ಧರ್ಮವಿರುದ್ಧ ಸಂಗಪರಿತ್ಯಾಗಿಗ ಳಾಗಿರುವರು! ಹೀಗೆ ತಾರತಮ್ಯದಿಂದಲೇ ಆಗಲೊಲ್ಲದೇಕೆ, ತ್ಯಾಗೈಕ ಲಕ್ಷಣರಾದ ಸಾಧ್ವಿಯರ, ಹಾಗು ಸುವಿಚಾರಿಗಳ ಲಕ್ಷಣದಲ್ಲಿಯೂ, ಆಚರಣೆಯಲ್ಲಿಯೂ ವಿಶೇಷ ಹೆಚ್ಚು ಕಡಿಮೆಯಿರುವದಿಲ್ಲ; ಆದ್ದರಿಂದ ನಾವು ಈ ಮೊದಲೆ ಹೇಳಿರುವ ಸಾಧ್ವಿಯರ ಲಕ್ಷಣಗಳೂ, ಆಚರಣೆ ಗಳೂ ಸುವಿಚಾರಿಗಳಿಗೂ ಬಹುಮಟ್ಟಿಗೆ ಸಂಬಂಧಿಸುವವೆಂದು ತಿಳಿಯುತ ಕ್ಕದ್ದು; ಆದರೂ ಅವುಗಳಲ್ಲಿಯ ಸೂಕ್ಷ್ಮಭೇದಗಳನ್ನು ಅರಿತುಕೊಳ್ಳು ವದು ಅವಶ್ಯವಾಗಿರುತ್ತದೆ.

೧ನೆಯ ಲಕ್ಷಣ—ಈ ಮೊದಲೆ ನಾವು ಸಾಧ್ವಿಯರ ಏಳು ಲಕ್ಷಣ ಗಳನ್ನು ಹೇಳಿರುವೆವಷ್ಟೆ? ಅವುಗಳಲ್ಲಿ ಮೊದಲನೆಯ ಲಕ್ಷಣವೆಂದರೆ, ಸಾಧ್ವಿ ಯರು ತಮ್ಮ ಪತಿಯನ್ನು ದೇವರೆಂದು ತಿಳಿಯುವದು; ಆದರೆ ಮೇಲೆ ಹೇಳಿದಂತೆ ಸುವಿಚಾರಿಗಳು ತಮ್ಮ ಪತಿಯನ್ನು ದೇವರೆಂದು ತಿಳಿಯದೆ, ಆತನನ್ನು ತಮ್ಮ ಪಾತಿವ್ರತ್ಯ ಧರ್ಮಾಚರಣೆಯ ಆಧಾರವೆಂದು ತಿಳಿಯುವ ದರಿಂದ, ಪತಿಯು ತಮ್ಮ ಧರ್ಮಕ್ಕೆ ಅಡ್ಡಬಂದಲ್ಲಿ, ಅಥವಾ ಸ್ವತಃ ಆತನು ತನ್ನ ಧರ್ಮವನ್ನು ಅತಿಕ್ರಮಿಸಿದಲ್ಲಿ ಸುವಿಚಾರಿಗಳು ಪತಿಯನ್ನು

ಬೋಧಿಸಿ ಆತನನ್ನು ಹಾದಿಗೆ ತರಲು ಯತ್ನಿಸುವರು. ಇದರಿಂದ ಸುವಿಚಾರಿಗಳು ಸಾಧ್ವಿಯರಂತೆ ಸರ್ವಧರ್ಮಪರಿತ್ಯಾಗಿಗಳಾಗಿ ಪತಿಗೆ ಶರಣುಹೋಗಿದೆ, ಪತಿಯ ಆಚರಣೆಯ ಯುಕ್ತಾಯುಕ್ತತೆಯ ಪರೀಕ್ಷಕರಾಗಿರುವದರಿಂದ, ಸಾಧ್ವಿಯರಂತೆ ಇವರ ಅಹಂಕಾರವು ಪೂರ್ಣ ನಷ್ಟವಾಗಿರುವದಿಲ್ಲ.

೨ನೆಯ ಲಕ್ಷಣ—ಇನ್ನು ಸಾಧ್ವಿಯರ ಎರಡನೆಯ ಲಕ್ಷಣವು, ಪತಿಯ ಸಂತೋಷವೇ ಸಾಧ್ವಿಯರ ಸಂತೋಷವಾಗಿರುತ್ತದೆಂಬದು. ಈ ಲಕ್ಷಣದ ಸಂಬಂಧದ ಸುವಿಚಾರಿಗಳ ಆಚರಣೆಯು ಬಹುತರ ಸಾಧ್ವಿಯರ ಆಚರಣೆಯಂತೆಯೇ ಇರುವದು; ಆದರೆ ಧರ್ಮದ ಕಡೆಗೆ ಪತಿಯ ಮನಸ್ಸನ್ನು ತಿರುಗಿಸುವ ಯತ್ನದಲ್ಲಿ ಪತಿಯ ಮನಸ್ಸು ಅಸಮಾಧಾನಪಟ್ಟರೆ ಇವರು ನಿರುಪಾಯವೆಂದು ತಿಳಿಯುವರು! ಸಂಸಾರದೊಳಗಿನ ಧರ್ಮಸಮ್ಮತ ಕೊರತೆಗಳನ್ನು ಇವರು ಪ್ರಸಂಗವಶಾತ್ ಪತಿಗೆ ಪ್ರತ್ಯಕ್ಷವಾಗಿಯಾದರೂ ತಿಳಿಸಬಹುದು; ಪತಿಯು ಅದನ್ನು ತಿರಸ್ಕರಿಸಿದರೆ ಆತನನ್ನು ಬೋಧಿಸಲೂಬಹುದು. ಧರ್ಮಸಾಧನದ ವಿಷಯದಲ್ಲಿ ಇವರೂ ಸಾಧ್ವಿಯರಂತೆ ಕಷ್ಟಸಹಿಷ್ಣುಗಳೇ ಆಗಿರುವರು. ಒಟ್ಟಿಗೆ, ಯಾವ ವಿಷಯದಲ್ಲಿಯೇ ಆಗಲಿ, ಧರ್ಮಕ್ಕೆ ಅಸಮ್ಮತವಾಗಿ ಪತಿಯೇ ಆಗಲಿ, ಪತಿಯ ಪರಿವಾರವೇ ಆಗಲಿ ನಡೆದರೆ, ಅವರನ್ನು ಎಚ್ಚರಗೊಳಿಸುವದು ತಮ್ಮ ಕರ್ತವ್ಯವೆಂದು ಸುವಿಚಾರಿಗಳು ತಿಳಿಯುವರಲ್ಲದೆ, ಧರ್ಮಸಮ್ಮತ ಸುಖಪ್ರಾಪ್ತಿಗಾಗಿ ಇವರು ಮನಃಪೂರ್ವಕವಾಗಿ ಯತ್ನಿಸುವರು! ಸುವಿಚಾರಿಗಳ ಈ ಉತ್ಕಟ ಧಾರ್ಮಿಕ ವೃತ್ತಿಯುಮೂಲಕ ಇವರ ಮನೆಯು ಪ್ರಸಂಗವಶಾತ್ ಅಶಾಂತವಾಗುತ್ತಿದ್ದರೂ, ಅದು ಧರ್ಮದ ಆ ವಾಸಸ್ಥಾನವಾಗಿರುವದರಲ್ಲಿ ಸಂಶಯವಿಲ್ಲ.

೩ನೆಯ ಲಕ್ಷಣ—ಪತಿವಾಕ್ಯವು ಮಂತ್ರಮೂಲವಾಗಿಯೂ, ಪತಿಯ ರೂಪವು ಧ್ಯಾನಮೂಲವಾಗಿಯೂ, ಪತಿಯ ಕೃಪೆಯು ಮೋಕ್ಷಮೂಲವಾಗಿಯೂ ತೋರುತ್ತಿರುವದು ಸಾಧ್ವೀತ್ವದ ಮೂರನೆಯ ಲಕ್ಷಣವೆಂದು ಹೇಳಿದೆಯಷ್ಟೆ? ಆದರೆ ಧರ್ಮಕ್ಕೆ ಅಸಮ್ಮತವಾದ ಪತಿಯ ವಾಕ್ಯವನ್ನು ಪಾಲಿಸಲು ಸುವಿಚಾರಿಗಳು ಹಿಂದೆಮುಂದೆ ನೋಡುವರು; ಆದರೆ

ಪತಿಯ ರೂಪವು ಇವರಿಗೂ ಸಾಧ್ವಿಯರಂತೆ ಧ್ಯಾನಮೂಲವಾಗಿರುವದು. ಇವರು ಪತಿಯ ಕೃಪೆಯು ಮೋಕ್ಷಸಾಧನವೆಂದು ತಿಳಿಯದೆ, ತಮ್ಮ ಪಾತಿವ್ರತ್ಯ ಧರ್ಮಪಾಲವು ತಮ್ಮ ಪರಗತಿಗೆ ( ಲೋಕಾಂತರ ಪ್ರಾಪ್ತಿಗೆ ) ಕಾರಣವೆಂದು ತಿಳಿಯುವರು.

೪ನೆಯ ಲಕ್ಷಣ—ಪತಿಯ ದೋಷವನ್ನು ಗುಣವಾಗಿ ತಿಳಿಯುವದು ಸಾಧ್ವಿಯರ ನಾಲ್ಕನೆಯ ಲಕ್ಷಣವೆಂದು ಹೇಳಿದೆ; ಆದರೆ ಸುವಿಚಾರಿಗಳು ಪತಿಯ ಗುಣಗಳನ್ನು ಗುಣಗಳನ್ನಾಗಿಯೂ, ದೋಷಗಳನ್ನು ದೋಷಗಳನ್ನಾಗಿಯೂ ಎಣಿಸಿ, ಶಕ್ಯವಿದ್ದವುಟ್ಟಿಗೆ ಪತಿಯ ದೋಷನಿವಾರಣಕ್ಕಾಗಿ ಯತ್ನಿಸುವರು; ಅದು ಸಾಧಿಸದಿದ್ದರೆ ಪತಿಯ ದೋಷಗಳನ್ನು ದುರ್ಲಕ್ಷಿಸಿ, ಆತನ ಗುಣಲೇಶದ ಅಭಿನಂದನದಿಂದಲಾದರೂ ತಮ್ಮ ಪತಿಭಕ್ತಿಯನ್ನು ಅಚ್ಚಳಿಯದಂತೆ ಕಾಯ್ದುಕೊಳ್ಳುವರಲ್ಲದೆ, ಪತಿಯನ್ನು ತಿರಸ್ಕರಿಸುವದಿಲ್ಲ! ಹೀಗೆ ಅನ್ಯರ ದೋಷ ಪರಿತ್ಯಾಗಮಾಡಿ ಗುಣಗ್ರಹಣಮಾಡುವವರನ್ನು ಸಾಧುಗಳೆಂದು ಕರೆಯಬೇಕೆಂದು ಭಗವತೀ ದಾಕ್ಷಾಯಣಿಯು ತನ್ನ ತಂದೆಯಾದ ದಕ್ಷನಿಗೆ ಹೇಳಿದ್ದನ್ನು, ಶ್ರೀಮದ್ಭಾಗವತದ ದಕ್ಷಯಜ್ಞಧ್ವಂಸದ ಪ್ರಸಂದಲ್ಲಿನೋಡಬಹುದು.

೫ನೆಯ ಲಕ್ಷಣ—ಸಾಧ್ವಿಯರು ತಮ್ಮ ಬುದ್ಧಿವೈಭವ, ಜ್ಞಾನವೈಭವ, ಧನವೈಭವಾದಿಗಳನ್ನು ತಮ್ಮ ಪತಿಯ ಚರಣಕ್ಕೆ ನಿವಾಳಿಸಿ ಚಲ್ಲಿಕೊಡುವಂತೆ, ಸುವಿಚಾರಿಗಳು ಚಲ್ಲಿಕೊಡುವದಿಲ್ಲ. ಅವನ್ನು ಪತಿಯ ಧರ್ಮಸಮ್ಮತ ಸುಖವೃದ್ಧಿಯುಮುಖಾಂತರ ತಮ್ಮ ಧರ್ಮಸಮ್ಮತಸುಖವನ್ನು ಅಭಿವೃದ್ಧಿಗೊಳಿಸಲಿಕ್ಕೆ ಉಪಯೋಗಿಸುವರು. ಇನ್ನು ಸಾಧ್ವಿಯರಂತೆ ಸುವಿಚಾರಿಗಳು ಪತಿಯ ವಿಶ್ವಾಸದ ಸರ್ವಬಳಗವಾಗಿರುವದರಲ್ಲಿಮಾತ್ರ ಆಕ್ಷೇಪವಿಲ್ಲ; ಆದರೆ ಇಲ್ಲಿಯೂ ಅವರ ಧರ್ಮದೃಷ್ಟಿಯು ತೆರೆದಿರುತ್ತದೆಂಬದನ್ನು ಮರೆಯಲಾಗದು. ಇನ್ನು ಸಾಧ್ವಿಯರು ಸ್ವತಃ ವಿಷಯವಿರಾಗಿಗಳಾಗಿದ್ದು, ಪತಿಯಸಲುವಾಗಿ ವಿಷಯರಾಗಿಗಳಾಗಿರುವಂತೆ, ಸುವಿಚಾರಿಗಳಸ್ಥಿತಿಯು ಇರುವದಿಲ್ಲ. ಅವರು ಧರ್ಮವಿರುದ್ಧವಾದ ವಿಷಯಸುಖಭೋಗದಲ್ಲಿಮಾತ್ರ ವಿರಾಗಿಗಳಾಗಿದ್ದು, ಧರ್ಮಸಮ್ಮತವಿಷಯಭೋಗದಲ್ಲಿ ಅವರು ರಾಗಿಗಳಾಗಿರುವರು; ಆದರೆ

ಧರ್ಮಕ್ಕೆ ವಿರುದ್ಧವಲ್ಲದ ಆ ವಿಷಯರಾಗವು ಪತಿಗೆ ಬೇಡಾಗಿದ್ದರೆ, ಸುವಿಚಾರಿಗಳು ಅದನ್ನು ಪರಿತ್ಯಜಿಸುವರು! ಮತ್ತು ದುರ್ದೈವದಿಂದ ತಮ್ಮ ಪತಿಯು ಮರಣಹೊಂದಿದರೆ, ಸಾಧ್ವಿಯರಂತೆ ಸುವಿಚಾರಿಗಳಾದರೂ ತಮ್ಮ ಯೋಗ್ಯತೆಗನುಸರಿಸಿ ಪತಿಯ ಸಹಗಮನಿಗಳು, ಅಥವಾ ಕಠಿಣತರವ್ರತಾವಲಂಬಿಗಳು ಆಗಬಹುದಲ್ಲದೆ, ಸಹಜದೇಹತ್ಯಾಗಿಗಳಾಗುವದು ಅಪರೂಪವು!

೬ನೆಯ ಲಕ್ಷಣ—ಪತಿಯ ವಿಶ್ವಾಸದ ಸರ್ವಬಳಗವಾಗುವದು ಸಾಧ್ವೀತ್ವದ ಆರನೆಯ ಲಕ್ಷಣವೆಂದು ಹೇಳಿರುತ್ತದೆ; ಪತಿಯು ಯಾವದೊಂದು ಕಾರ್ಯದ ವಿಷಯದ ಆಲೋಚನೆಯನ್ನು ಕೇಳಿದರೆಮಾತ್ರ ಸಾಧ್ವಿಯರು ಪತಿಯಮನಸ್ಸು ನೋಯದಂತೆ ವಿನಯದಿಂದ ಹೇಳುವರು; ಆದರೆ ಸುವಿಚಾರಿಗಳು, ಪತಿಯು ಕೇಳಲಿ, ಕೇಳದಿರಲಿ, ತಮಗೆ ಸರಿದೋರಿದ ಆಲೋಚನೆಯನ್ನು ಪತಿಯ ಮನಸ್ಸು ನೊಂದರೂ ಹೇಳಲಿಕ್ಕೆ ಹಿಂದೆಮುಂದೆ ನೋಡುವದಿಲ್ಲ. ಇವರು ಪತಿಯ ಅಥವಾ ಅನ್ಯರ ಯಾವಅಪರಾಧಗಳನ್ನಾದರೂ ಅವರ ಮುಂದೆ ಇಡಲು ಹಿಂದೆಮುಂದೆ ನೋಡುವದಿಲ್ಲ. ಉಳಿದ ಮಾತುಗಳಲ್ಲಿ ಇವರ ಆಚರಣೆಯು ಸಾಧ್ವಿಯರಂತೆಯೇ ಇರುವದು.

೭ನೆಯ ಲಕ್ಷಣ—ಸ್ವತಃ ವಿಷಯವಿರಾಗಿಗಳಾಗಿದ್ದು ಪತಿಯ ಸಲುವಾಗಿ ವಿಷಯರಾಗಿಗಳಾಗಿರುವದು ಸಾಧ್ವೀತ್ವದ ೭ನೆಯ ಲಕ್ಷಣವೆಂದು ಹೇಳಿದೆ; ಆದರೆ ಸುವಿಚಾರಿಗಳು ಅಧರ್ಮತ್ಯಾಗಿಗಳಲ್ಲದೆ, ಸಾಧ್ವಿಯರಂತೆ ಸರ್ವಧರ್ಮತ್ಯಾಗಿಗಳಲ್ಲ, ಇವರು ಸಕಾಮತಪಸ್ವಿಗಳಾಗಿರುವರು.

ನಾವು ಸಾಧ್ವಿಯರ ಹಾಗು ಸುವಿಚಾರಿಗಳ ಆಚಾರವಿಚಾರಗಳಲ್ಲಿಯ ಕೆಲವು ಸೂಕ್ಷ್ಮಭೇದಗಳಸೂಚಿಸಿದ್ದನ್ನು ವಾಚಕರು ಮನಸ್ಸಿನಲ್ಲಿ ತೂಗಿ ನೋಡತಕ್ಕದ್ದು. ಈ ಸುವಿಚಾರಿಗಳ ಮೇಲುಪಂಗ್ತಿಯಲ್ಲಿ ಪಾಂಡವಪತ್ನಿಯಾದ ದ್ರೌಪದಿಯನ್ನು ಇಟ್ಟುಕೊಂಡು, ಮಹಾಭಾರತದಲ್ಲಿಯ ಆಕೆಯ ಆಚಾರವಿಚಾರಗಳನ್ನು ಪರ್ಯಾಲೋಚಿಸಿ ನೋಡಿದರೆ, ಸುವಿಚಾರಿಗಳ ಯೋಗ್ಯತೆಯೂ ಸಾಮಾನ್ಯವಾದದ್ದಿರದೆ, ಅವರೂ ಸಾಧ್ವಿಯರಂತೆ ಸ್ವಪರೋದ್ಧಾರಕರಾಗಿರುವರೆಂಬಮಾತು ಗೊತ್ತಾಗಬಹುದು. ಸುವಿ

ಚಾರಿಗಳು ಶಾಸ್ತ್ರೋಕ್ತವಾದ ತಮ್ಮ ಪಾತಿವ್ರತ್ಯಧರ್ಮವನ್ನು ಯಥಾರ್ಥವಾಗಿ ಪಾಲಿಸಿದಮಾನದಿಂದ, ಅವರಿಗೆ ಶಾಸ್ತ್ರೋಕ್ತವಾದ ಪತಿಲೋಕಾದಿ ಉಚ್ಚಲೋಕಗಳ ಪ್ರಾಪ್ತಿಯಾಗುವದೆಂದು ತಿಳಿಯತಕ್ಕದ್ದು; ಆದರೆ ನಿಷ್ಕಾಮತಪಸ್ವಿಗಳಾದ ಸಾಧ್ವಿಯರಂತೆ ಇವರಿಗೆ ಈಶ್ವರಕೃಪಾಲಬ್ಧಮೋಕ್ಷಪ್ರಾಪ್ತಿಯು ಆಗಲಾರದು. ಈ ಸುವಿಚಾರಿವರ್ಗದಲ್ಲಿ ದ್ರೌಪದಿಯಂತೆ, ಅಹಲ್ಯಾ, ತಾರಾ, ಮಂಡೋದರಿ ಮೊದಲಾದ ಪ್ರಾತಃಸ್ಮರಣೀಯರು ಬರುವರು.

**ಪತಿಭಕ್ಷಕಸ್ತ್ರೀಯರು**—ಪುರಾತನಕಾಲದಿಂದ ಲೋಕನಿಂದ್ಯರಾಗಿದ್ದು, ಈಗಮಾತ್ರ ಲೋಕಮಾನ್ಯರಾಗುತ್ತ ನಡೆದಿರುವ ಈವರ್ಗದಸ್ತ್ರೀಯರ ಲಕ್ಷಣಗಳನ್ನು ಇನ್ನು ಹೇಳುವೆವು. ಪತಿಭಕ್ಷಕಸ್ತ್ರೀವರ್ಗವೆಂದರೆ, ತಮ್ಮಪತಿಗಳು ತಮ್ಮ ವಿಷಯೋಪಭೋಗದ ಸಾಧನಗಳೆಂದು ತಿಳಿಯುವ, ಅಥವಾ ತಮ್ಮ ಪತಿಗಳು ತಮ್ಮ ಯಥೇಚ್ಛ ವಿಷಯಸುಖಭೋಗಕ್ಕೆ ಪ್ರತಿಬಂಧಕರೆಂದು ತಿಳಿಯುವಸ್ತ್ರೀಯರ ವರ್ಗವೆಂದು ತಿಳಿಯತಕ್ಕದ್ದು. ಈ ಮೊದಲೆ ಪತಿರಕ್ಷಕಸ್ತ್ರೀವರ್ಗದಲ್ಲಿ—೧ ಸಾಧ್ವಿಯರು ೨ ಸುವಿಚಾರಿಗಳು ಎಂಬ ಎರಡು ಉಪವರ್ಗಗಳಿರುವವೆಂದು ಹೇಳಿರುವೆವಷ್ಟೆ? ಅದರಂತೆ ಈ ಪತಿಭಕ್ಷಕ ಸ್ತ್ರೀಯರಲ್ಲಿಯೂ, ೧ ಸುಖಲೋಲುಪರು ೨ ಸಾಹಸಿಗಳು ಎಂಬ ಎರಡು ಉಪವರ್ಗಗಳು ಇರುವವು! ತಮ್ಮ ಪತಿಗಳು ತಮ್ಮ ವಿಷಯಸುಖಭೋಗದ ಸಾಧನವೆಂದು ತಿಳಿಯುವವರು ಸುಖಲೋಲುಪರು; ತಮ್ಮ ಪತಿಗಳು ತಮ್ಮ ಯಥೇಚ್ಛವಿಷಯಸುಖಭೋಗಕ್ಕೆ ಪ್ರತಿಬಂಧಕರೆಂದು ತಿಳಿಯುವವರು ಸಾಹಸಿಗಳು! ಅಂತು ಒಟ್ಟಿಗೆ ಸ್ತ್ರೀಯರಲ್ಲಿ— ೧ ಸಾಧ್ವಿಯರು, ೨ ಸುವಿಚಾರಿಗಳು, ೩ ಸುಖಲೋಲುಪರು, ೪ ಸಾಹಸಿಗಳು ಎಂಬ ನಾಲ್ಕುವರ್ಗಗಳು ಇದ್ದಂತಾಯಿತು. ಇವುಗಳಲ್ಲಿ ಪತಿರಕ್ಷಕ ಸ್ತ್ರೀವರ್ಗವು ಆಸ್ತಿಕವಾಗಿದ್ದು, ಅದು ದೇವರು—ಧರ್ಮ—ಪಾಪಪುಣ್ಯ—ಗುರುಹಿರಿಯರು—ಶಾಸ್ತ್ರ—ಪುರಾಣ ಮೊದಲಾದ ಮನೋನಿಗ್ರಹಕಾರಿ ಬಂಧನಗಳಿಗೆ ಒಳಗಾಗಿರುವದರಿಂದ, ಆವರ್ಗದ ಸ್ತ್ರೀಯರಲ್ಲಿ ಮನೋನಿಗ್ರಹವೂ, ನಯ—ಭಯ—ಭಕ್ತಿಗಳೂ ತೋರುತ್ತಿರುವವು; ಆದರೆ ಪತಿಭಕ್ಷಕಸ್ತ್ರೀವರ್ಗವು ನಾಸ್ತಿಕವಾಗಿದ್ದು, ಆ ವರ್ಗದಲ್ಲಿ ಐಹಿಕಸುಖಾಸಕ್ತಿಯು ಪ್ರಬಲವಾಗಿರು

ವದರಿಂದ, ಆ ವರ್ಗದಸ್ತ್ರೀಯರಲ್ಲಿ ಸ್ವಚ್ಛಂದವೃತ್ತಿ, ಅಹಂಮನ್ಯತೆ, ಜಗತ್ತುಚ್ಛೀಕರಣ, ನಿರ್ಲಕ್ಷ್ಯ ಇವು ತೋರುತ್ತಿರುವವು! ಇಂತಹ ಉದ್ಧಾಮವೃತ್ತಿಯ ಪತಿಭಕ್ಷಕಸ್ತ್ರೀಯರ ಲಕ್ಷಣಗಳು, ವಿನಮ್ರವೃತ್ತಿಯ ಪತಿರಕ್ಷಕಸ್ತ್ರೀಯರ ಲಕ್ಷಣಗಳಿಂದ ತೀರ ಭಿನ್ನವಾಗಿರುವದು ಸ್ವಾಭಾವಿಕವು. ಈ ಪತಿಭಕ್ಷಕಸ್ತ್ರೀವರ್ಗದಲ್ಲಿಯು ಸುಖಲೋಲುಪ ಸ್ತ್ರೀಯರು ನೀಚರಾಗಿದ್ದರೆ, ಸಾಹಸೀಸ್ತ್ರೀಯರು ನೀಚತಮರಾಗಿರುವರು! ಇವರಲ್ಲಿಯ ಸೂಕ್ಷ್ಮಭೇದವು ಮನಸ್ಸಿನಲ್ಲಿ ಬರುವದಕ್ಕಾಗಿ ಇವರ ಲಕ್ಷಣಗಳನ್ನು ವಿಶದವಾಗಿಹೇಳುವೆವು. ಇವರಿಬ್ಬರೂ ಉಭಯಕುಲವಿಘಾತಕರೆಂಬ ಮಾತನ್ನು ಲಕ್ಷ್ಯದಲ್ಲಿಡತಕ್ಕದ್ದು. ಈಗ ಮೊದಲು ನಾವು ಸುಖಲೋಲುಪರ ಲಕ್ಷಣಗಳನ್ನು ಹೇಳುತ್ತೇವೆ.

**ಸುಖಲೋಲುಪಸ್ತ್ರೀಯರ ಲಕ್ಷಣಗಳು** — ಧರ್ಮಹೀನರಾದ ಈ ಲೋಕನಿಂದ್ಯಸ್ತ್ರೀಯರ ಎಲ್ಲ ಲಕ್ಷಣಗಳನ್ನು ವರ್ಣಿಸುವದು ಈಗ ಶಕ್ಯವಲ್ಲದಿದ್ದರೂ, ಈ ಮೊದಲೆ ನಾವು ಹೇಳಿರುವ ಪತಿರಕ್ಷಕಸ್ತ್ರೀಯರ, ವಿಶೇಷವಾಗಿ ಸಾಧ್ವಿಯರ ಏಳು ಲಕ್ಷಣಗಳಿಗೆ ವಿರುದ್ಧವಾಗಿರುವ ಲಕ್ಷಣಗಳು ಇವರಲ್ಲಿ ಹೇಗೆ ಇರುತ್ತವೆಂಬದನ್ನು ಹೇಳಲು ಯತ್ನಿಸುತ್ತೇವೆ!

**೧ನೆಯ ಲಕ್ಷಣ**—ನಾವು ಈಮೊದಲೆ “ಪತಿಯೇ ದೇವರೆಂ”ದು ತಿಳಿಯುವದು ಸಾಧ್ವಿಯರ ಪ್ರಧಾನವಾದ ಪ್ರಥಮಲಕ್ಷಣವೆಂದು ಹೇಳಿದುವೆವಷ್ಟೆ? ಆದರೆ ಅದಕ್ಕೆ ವಿರುದ್ಧವಾಗಿ “ಸ್ತ್ರೀದೇವಾಃ ಕಾಮುಕಿಂಕರಾಃ” ಎಂಬಂತೆ, ತಾವೇ ಪತಿಗೆ ದೇವರಾಗಿರಬೇಕೆಂದು, ಅರ್ಥಾತ್ ಪತಿಯು ತಮ್ಮ ಕಿಂಕರನಾಗಿರಬೇಕೆಂದು, ತಿಳಿಯುವದು ಈ ಸುಖಲೋಲುಪ ಸ್ತ್ರೀಯರ ಮುಖ್ಯವಾದ ಒಂದನೆಯ ಲಕ್ಷಣವಾಗಿರುತ್ತದೆ. ತರಬರುವದಕ್ಕಾಗಿ, ಮನೆಗೆಲಸಮಾಡುವದಕ್ಕಾಗಿ, ತಾವು ಹೇಳಿದಂತೆ ಕೇಳುವದಕ್ಕಾಗಿ, ತಮ್ಮ ಅನುವು ಆಪತ್ತುಗಳ ನಿವಾರಣಕ್ಕಾಗಿ, ತಾವು ಹೆಮ್ಮೆಪಡುವದಕ್ಕಾಗಿ, ಅಥವಾ ಇಂತಹ ಬೇರೆಸ್ವಾರ್ಥಕ್ಕಾಗಿ, ಅರ್ಥಾತ್ ಕತ್ತೆಯಂತೆ ದುಡಿಯುವದಕ್ಕಾಗಿ ಇವರಿಗೆ ಪತಿಯುಬೇಕು; ಆದರೆ ಇಂತಹ ಸ್ವಾರ್ಥಕ್ಕೆ ಉಪಯೋಗವಿಲ್ಲದ ಪತಿಯು ಇವರಿಗೆ ಬೇಡ. ಅಂತಹ ನಿರು

ಷಯುಕ್ತ ಪತಿಯನ್ನು ಇವರು ತಿರಸ್ಕರಿಸುವರು; ಆದರೆ ತಮ್ಮ ಸುಖ ಲೋಲುಪತೆಗೆ ಅವಶ್ಯವಾಗಿರುವ ತಮ್ಮ ಸೌಭಾಗ್ಯರಕ್ಷಣಕ್ಕಾಗಿ ಇವರು ಅಂತಹ ಪತಿಯ ನಾಶವನ್ನು ಇಚ್ಛಿಸದಿರುವದೊಂದು ಪತಿಯ ಪುಣ್ಯವೇ ಸರಿ! ಇವರ ಈ ನಡತೆಗೆ ಒಂದು ಬಗೆಯ ಕ್ಷುದ್ರಕೀಟಕದ ನಡತೆಯನ್ನು ಉದಹರಿಸಬಹುದು. ಆ ಒಂದು ಕ್ಷುದ್ರಕೀಟಕವು ಬೇರೊಂದು ಹುಳದ ಮೈಯಲ್ಲಿದ್ದು, ಅದರ ಮೈಯನ್ನೇ ಮೇದು ಜೀವಿಸುತ್ತಿರುವದು; ಆದರೆ ಆ ಕೀಟಕವು ತನ್ನ ಆಹಾರವಾಗಿದ್ದ ಆ ಹುಳದ ಮೈಯನ್ನು ಪೂರಾ ಮೇದುಬಿಟ್ಟು, ಅದನ್ನು ಒಮ್ಮೆಲೆ ಕೊಂದುಬಿಡುವದಿಲ್ಲ. ಆ ಹುಳವು ತನ್ನ ಆಹಾರವಾಗಿ ಬಹುದಿವಸವಿದ್ದು, ತಾನು ಚಿರಕಾಲ ಚಕ್ಕಂದದಿಂದ ಬದುಕಬೇಕೆಂಬ ಆಶೆಯಿಂದ ಆ ಕೀಟಕವು ಆ ಹುಳವನ್ನು ಒಮ್ಮೆಲೆ ಕೊಂದುಬಿಡದೆ, ಅದನ್ನು ಮೇದು ಪುಷ್ಟವಾಗಗೊಟ್ಟು, ಅದರ ಮೈಯನ್ನು ಕ್ರಮವಾಗಿ ಮೇದು ತಾನು ಸುಖಿಸುವದು! ಇದೇ ರೀತಿಯು ಸುಖಲೋಲುಪ ಸ್ತ್ರೀಯರಿಗೆ ಹತ್ತುವದು! ಇವರು ತಮ್ಮ ಚಕ್ಕಂದ ಕ್ಕಾಗಿ ಪರಿಪರಿಯಿಂದ ಪತಿಯ ರಕ್ತಶೋಷಣಮಾಡುವರುಸರಿ; ಆದರೆ ಆತನು ಕ್ಷೀಣನಾಗಿ ನಾಶವಾಗದಂತೆ ಮಾನಭಾವೀತನದಿಂದ ಬಗೆಬಗೆಯ ಮೋಹಜಾಲಬೀಸಿ ಆತನನ್ನು ರಮಿಸುವರು! ಆದರೂ ಇವರು ತಮ್ಮ ಪತಿಯ ಕುರೂಪ, ಗುಣಹೀನತೆ, ದೌರ್ಬಲ್ಯಮೊದಲಾದ ಕೊರತೆಗಳಿ ಗಾಗಿ ಮೂಗುಮುರಿಯುವರಲ್ಲದೆ, ಪ್ರಸಂಗವಶಾತ್ ತಮ್ಮ ಆ ತಿರಸ್ಕಾರ ವನ್ನು ಪತಿಯ ಮುಂದೆ ವ್ಯಕ್ತಮಾಡಿ ಆತನ ಮನಸ್ಸಿಗೆ ಗಾಯಮಾಡು ತ್ತಿರುವದು ಇವರ ಖೋಡಿಚಾಳಿಯಾಗಿರುತ್ತದೆ!

**೨ನೆಯ ಲಕ್ಷಣ**—ಪತಿಯ ಸಂತೋಷವೇ ತಮ್ಮ ಸಂತೋಷ ವೆಂದು ತಿಳಿಯುವದು ಪತಿರಕ್ಷಕ ಸ್ತ್ರೀವರ್ಗದ ಎರಡನೆಯ ಲಕ್ಷಣವೆಂದು ನಾವು ಈ ಮೊದಲೆ ಹೇಳಿರುವೆವಷ್ಟೆ? ಆದರೆ ಇದಕ್ಕೆ ವಿರುದ್ಧವಾಗಿ, ತಮ್ಮ ಸಂತೋಷವೇ ಪತಿಯಸಂತೋಷವಾಗಿರಬೇಕೆಂದು ಇಚ್ಛಿಸುವದು, ಅರ್ಥಾತ್, ತಮ್ಮ ಸಂತೋಷಕ್ಕೆ ಬಾಧೆಬಾರದಂತೆ ತಮ್ಮ ಪತಿಯು ನಡೆ ದುಕೊಳ್ಳಬೇಕೆಂದು ಹಟಹಿಡಿಯುವದು ಈ ಸುಖಲೋಲುಪಸ್ತ್ರೀಯರ ಎರಡನೆಯ ಲಕ್ಷಣವಾಗಿರುತ್ತದೆ. ತಮ್ಮ ಸೇವಕನಾದ ಪತಿಯು ತಮಗೆ

